# ಅಚಲ ತಿಂಗಳ ಪತ್ರಿಕೆ

ಬೆಲೆ 4/-

ಏಪ್ರಿಲ್ 2004

ಒಳಗೇನಿದೆ






ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ, ಬೆಂಗಳೂರು

# ಅಚಲ

ಸಂಪುಟ - 19 ಸಂಚಿಕೆ : 4





ಪ್ರಕಾಶಕರು

ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ

ಬೆಂಗಳೂರು


ಚಂದಾ ಹಣವನ್ನು ಚೆಕ್‌ನಲ್ಲಿ ಕಳುಹಿಸುವವರು ರೂ. 10 ಬ್ಯಾಂಕ್ ಕಮೀಷನ್ ಸೇರಿಸಿ ಕಳುಹಿಸಬೇಕು. ಎಂ. ಓ. ಫಾರ್ಮಿನ ಕೊನೆಯ ಭಾಗದಲ್ಲಿ ತಮ್ಮ ಹೆಸರು ವಿಳಾಸಗಳನ್ನು ಸ್ಪಷ್ಟವಾಗಿ ನಮೂದಿಸಬೇಕು. ಬದಲಾದ ವಿಳಾಸವನ್ನು ದಯವಿಟ್ಟು ಬರೆದು ತಿಳಿಸಿ.


Achala - Edited by
Dr. N. Gayathri

Published by
Dr. G. Ramakrishna on behalf of Jagruthi Mahila Adhyayana Kendra

Printed at
Lipi Mudrana
Bangalore - 560 004


ಆತ್ಮೀಯರೆ,

ಕಳೆದ 19 ವರ್ಷಗಳಿಂದಲೂ ತಾವುಗಳು ಪ್ರೀತಿ, ಅಭಿಮಾನದಿಂದ ಅಚಲ ಪತ್ರಿಕೆಯನ್ನು ನಿಮ್ಮದಾಗಿಸಿಕೊಂಡು ಪೋಷಿಸುತ್ತಾ ಬಂದಿರುತ್ತೀರಿ. ಮಹಿಳಾ ಚಳುವಳಿಯ ಮತ್ತು ಸಂಶೋಧನೆಯ ಕ್ಷೇತ್ರದಲ್ಲಿ ಇನ್ನೂ ಬೆಟ್ಟದಷ್ಟು ಕೆಲಸವಾಗಬೇಕಿದೆ. ಈ ಮಹತ್ತರ ಕಾರ್ಯದಲ್ಲಿ ನಾವೆಲ್ಲರೂ ಒಟ್ಟಾಗಿ ಶ್ರಮಿಸಬೇಕಿದೆ. ನೀವೂ ಅಚಲ ಪತ್ರಿಕೆಯನ್ನು ನಿಮ್ಮ ವಿಚಾರಗಳ ವೇದಿಕೆಯನ್ನಾಗಿ ಮಾಡಿಕೊಳ್ಳಿ ಮತ್ತು ಪತ್ರಿಕೆಯ ಪ್ರಸಾರವನ್ನು ಹೆಚ್ಚಿಸುವಲ್ಲಿ ನೆರವಾಗಿ.

ಯಾವುದೇ ವಿವರಗಳನ್ನು ಬರೆಯದ ಚಂದಾಹಣವು ಹಲವಾರು ಎಂ.ಓ ಗಳಲ್ಲಿ ನಮಗೆ ತಲುಪಿದೆ. ಚಂದಾದಾರರು ದಯವಿಟ್ಟು ಎಂ.ಓ ಫಾರ್ಮಿನ ಹಿಂಭಾಗದಲ್ಲಿ ವಿಳಾಸವನ್ನು ಬರೆಯಿರಿ.

## ಅಚಲದ ಚಂದಾ ಬದಲಾಗಿದೆ

ವಾರ್ಷಿಕ ಚಂದಾ - ರೂ. 50/- (ವ್ಯಕ್ತಿಗಳಿಗೆ)
ರೂ. 100/- (ಸಂಸ್ಥೆಗಳಿಗೆ)
ಅಜೀವ ಚಂದಾ - ರೂ. 300/- (ವ್ಯಕ್ತಿಗಳಿಗೆ)
ರೂ. 400/- (ಸಂಸ್ಥೆಗಳಿಗೆ)


ಅಚಲ ವಿಳಾಸ

108, ಸ್ಕೈಲೈನ್ ಸುರಭಿ, 14-ಪಿ, ವಿದ್ಯಾಪೀಠ ರಸ್ತೆ
ಬನಶಂಕರಿ 3ನೇ ಹಂತ, ಬೆಂಗಳೂರು - 560 085

## ಸಂಪಾದಕೀಯ

# ಈ ಶತಮಾನದ ಹೊಸ ದುರಂತ

ಚುನಾವಣೆಯ ಸಂದರ್ಭದಲ್ಲಿ ಮದ್ಯ, ಸೀರೆ ಮುಂತಾದ ಆಮಿಷಗಳಿಂದ ಮತದಾರರನ್ನು ಒಲಿಸಿಕೊಂಡು ಮತಗಳಿಸಿ ವಿಶ್ವದ ದೊಡ್ಡ ಪ್ರಜಾಪ್ರಭುತ್ವ ರಾಷ್ಟ್ರ ಎಂದು ಕರೆಸಿಕೊಳ್ಳುವ ಸಂಪ್ರದಾಯ ಜಾರಿಯಲ್ಲಿರುವುದು ಇಂದು ನಿನ್ನೆಯದಲ್ಲ. ಈ ಸಂಪ್ರದಾಯವನ್ನು ರೂಢಿಸಿಕೊಂಡು ಬಂದಿರುವ ಎಲ್ಲ ಹಣವಂತ ರಾಜಕೀಯ ಪಕ್ಷಗಳು ಈ ಸಂಪ್ರದಾಯದ ಬಗೆಗೆ ನಾಚಿಕೆ ಪಟ್ಟುಕೊಳ್ಳುವುದಿರಲಿ, ರಾಜಾರೋಷವಾಗಿ ಇದನ್ನೊಂದು ಒಪ್ಪಿತ ಆಚರಣೆಯನ್ನಾಗಿ ಮಾಡಿಕೊಂಡಿರುವುದು ನಮ್ಮ ರಾಜಕೀಯ ದುರಂತ. ಆದರೆ ಇತ್ತೀಚೆಗೆ ಲಖನೌನಲ್ಲಿ ಪ್ರಧಾನಿ ಅಟಲ್ ಬಿಹಾರಿ ವಾಜಪೇಯಿ ಅವರ ಚುನಾವಣಾ ಪ್ರಚಾರದ ಉಸ್ತುವಾರಿ ವಹಿಸಿಕೊಂಡಿದ್ದ ಬಿಜೆಪಿ ನಾಯಕ ಲಾಲ್‌ಜಿ ಟಂಡನ್‌ರವರ ಹುಟ್ಟುಹಬ್ಬದ ಆಚರಣೆಗೆಂದು ಹತ್ತು ಸಾವಿರ ಮಹಿಳೆಯವರನ್ನು ಸೇರಿಸಿ, ಆ ಸಂಭ್ರಮದಲ್ಲಿ ಇಪ್ಪತ್ತೈದು ಮಹಿಳೆಯರು ಸಾಯಲು ಕಾರಣವಾದ ಘಟನೆ ಈ ಶತಮಾನದ ಹೊಸ ದುರಂತ ಮಾತ್ರ ಅಲ್ಲ, ಈ ಶತಮಾನದ ಹೊಸ್ತಿಲಲ್ಲೇ ನಡೆದ ದೇಶ ನಾಚಿಕೆ ಪಡಬೇಕಾದಂತಹ ಅಸಹ್ಯಕಾರಿ ಘಟನೆ.

ಲಖನೌನ ಚಂದ್ರಶೇಖರ ಆಜಾದ್ ಪಾರ್ಕ್‌ನಲ್ಲಿ ನಿಷೇಧಾಜ್ಞೆ ಇದ್ದರೂ, ಅದನ್ನು ಉಲ್ಲಂಘಿಸಿ ಬಿ.ಜೆ.ಪಿ. ನಾಯಕರು ಸುಮಾರು ಹತ್ತು ಸಾವಿರ ಮಹಿಳೆಯರನ್ನು ಸೇರಿಸಿದ್ದರು. ಬಡ ಮಹಿಳೆಯರು ತಮ್ಮ ಹಸುಗೂಸುಗಳೊದಿಗೆ ನೂರು ರೂಪಾಯಿ ಬೆಲೆ ಬಾಳುವ ಸೀರೆ ಪಡೆಯಲೆಂದು ಆ ಸ್ಥಳಕ್ಕೆ ಧಾವಿಸಿ ಬಂದಿದ್ದವರು ಜೀವ ಕಳೆದುಕೊಳ್ಳಬೇಕಾಗಬಹುದೆಂದು ಯಾರೂ ಕನಸಿನಲ್ಲೂ ಎಣಿಸಿರಲಿಲ್ಲ. ಸೀರೆ ವಿತರಿಸುತ್ತಿದ್ದ ಮಂದಿಗೆ ಮರ್ಯಾದೆಯಾಗಿ ಸೀರೆ ಹಂಚಬೇಕೆಂಬ ಸೌಜನ್ಯ, ಸನ್ನಡತೆಯೂ ಇಲ್ಲ. ಯಾರೋ ಸೀರೆಯನ್ನು ಗುಂಪಿನ ಮಧ್ಯೆ ಎಸೆದರಂತೆ ಹಾಗೆ ಎಸೆದಾಗ ಗುಂಪಿನಲ್ಲಿ ನೂಕು ನುಗ್ಗಲಾಗಿ ಈ ದುರಂತ ಸಂಭವಿಸಿತು ಎಂಬುದು ಸ್ಥಳದಲ್ಲಿದ್ದವರ ಅಭಿಪ್ರಾಯವಾಗಿದೆ. ಆಗ ಲಾಲ್‌ಜಿ ಟಂಡನ್ ಸ್ಥಳದಲ್ಲಿದ್ದರೋ ಇಲ್ಲವೋ, ಸೀರೆಯ ವಿತರಣೆ ಸರಿಯಾಗಿ ಆಯಿತೋ ಇಲ್ಲವೋ - ಇಂತಹ ವಿಷಯಗಳ ಚರ್ಚೆಗಿಂತ ಇಂತಹ ಘಟನೆಯೊಂದು ನಡೆದ ನಂತರ ಬಿ.ಜೆ.ಪಿ. ಪಕ್ಷದ ವಕ್ತಾರರ ವರ್ತನೆ ಗಾಭರಿ ಹುಟ್ಟಿಸುತ್ತದೆ. ತಮ್ಮ ಪಕ್ಷದ ಕಾರ್ಯಕ್ರಮಕ್ಕೂ ಅಲ್ಲಿ ನಡೆದ ಸೀರೆ ವಿತರಣೆ ಕಾರ್ಯಕ್ರಮಕ್ಕೂ ಏನೂ ಸಂಬಂಧವಿಲ್ಲ ಎಂದು ಬಿ.ಜೆ.ಪಿ. ಪಕ್ಷವು ಕೈತೊಳೆದುಕೊಂಡು ಬಿಟ್ಟಿತು. ಇನ್ನೂ ಹೆಚ್ಚೆಂದರೆ ಲಾಲ್‌ಜಿ ಟಂಡನ್ ಪ್ರಧಾನಿಯವರ ಚುನಾವಣಾ ಪ್ರಚಾರಾಧಿಕಾರಿಯೇ ಅಲ್ಲ ಎಂದೂ, ಆ ಸ್ಥಳದಲ್ಲಿ ಇನ್ನೂ ಚುನಾವಣೆಯನ್ನು ಘೋಷಿಸಿಲ್ಲವಾದ್ದರಿಂದ ಇದು ಚುನಾವಣಾ ನಿಯಮದ ಉಲ್ಲಂಘನೆಯಲ್ಲವೆಂದೂ ಬಿ.ಜೆ.ಪಿ. ಪಕ್ಷದ ವಿವಿಧ ನಾಯಕರು ವಿವಿಧ ರೀತಿಯಲ್ಲಿ ಸಮರ್ಥಿಸಿಕೊಳ್ಳುತ್ತಾ ಹೇಳಿಕೆಗಳನ್ನು ಕೊಡಲಾರಂಭಿಸಿದರು. ಇಂತಹ ತಾಂತ್ರಿಕವಾದ ಶುಷ್ಕ ಚರ್ಚೆಗೆ ಮನುಷ್ಯತ್ವದ ಬೆಲೆ ಅರ್ಥವಾದೀತೇ?

ಮನುಷ್ಯತ್ವವಿರುವ ಯಾರಿಗೇ ಆದರೂ ಆ ಸೀರೆ ವಿತರಣೆಯ ದೃಶ್ಯವನ್ನು ಊಹಿಸಿಕೊಂಡರೆ ಸಾಕು, ಹೊಟ್ಟೆಯಲ್ಲಿ ಸಂಕಟವಾಗುತ್ತದೆ. ಅಲ್ಲಿ ಸುತ್ತ ಮಹಿಳೆಯರನ್ನು ತುಳಿದು ಸಾಯಿಸಿರುವವರು ಹೊರಗಿನವರಲ್ಲ, ಬಡತನದ ಬೇಗೆಯಲ್ಲಿ ಬಳಲಿರುವ ಮಹಿಳೆಯರು ತಮ್ಮ ಮಾನ ಮುಚ್ಚಿಕೊಳ್ಳಬಲ್ಲ ಸೀರೆಗಾಗಿ ಅಲ್ಲಿಗೆ ಬಂದು ಭಿಕ್ಷುಕರಂತೆ ಕಚ್ಚಾಡಿ ಅವರನ್ನು ಅವರೇ ತುಳಿದು, ಹೊಡೆದಾಡಿ ಸತ್ತಿರಬಹುದಾದ ಒಂದು ದೃಶ್ಯವನ್ನು ಯಾರು ಊಹಿಸಿಕೊಂಡರೂ ಅದಕ್ಕೆ ಕಂಬನಿ ಮಿಡಿಯಬಹುದೇ ಹೊರತು ತಾರ್ಕಿಕ ವಿವರಣೆಗಳನ್ನು ಕೊಟ್ಟು 'ಆಕಸ್ಮಿಕ' ಎಂದು ಹೇಳಿ ಕೈತೊಳೆದುಕೊಳ್ಳಲು ಸಾಧ್ಯವಿಲ್ಲ. ಬಡ ಮಹಿಳೆಯರನ್ನು ಭಿಕ್ಷುಕಿಯರನ್ನಾಗಿ ನಡೆಸಿಕೊಂಡ ಬಿಜೆಪಿ ಪಕ್ಷದ ವರ್ತನೆ ಅವರು ಯಾರಿಗಾಗಿ ಹೊಳೆಯುತ್ತಾರೆ, ಎಂಬುದನ್ನು ಸ್ಪಷ್ಟ ಪಡಿಸಿದೆ. ಬಡ ಮಹಿಳೆಯರನ್ನು ಕುರಿತ ಆ ಪಕ್ಷದ ಧೋರಣೆ ಎಂದು ಹೇಳಿ ಈ ಸಂದರ್ಭದಲ್ಲಿ ಸುಮ್ಮನಿರಲು ಸಾಧ್ಯವಿಲ್ಲ. ಅವರ ಪಕ್ಷದವರೇ ಆದ ಮಹಿಳಾ ರಾಜಕಾರಣಿಗಳನ್ನೂ ಹೀಗೆಯೇ ಸತ್ಕರಿಸಬಹುದು ಎಂಬುದಕ್ಕೆ ನಮ್ಮ ನಾಡಿನ ಉದಾಹರಣೆಯೇ ಇದೆ. ಆನೇಕಲ್ಲಿನ ಗ್ರಾಮ ಪಂಚಾಯಿತಿ ಅಧ್ಯಕ್ಷೆ ಮಂಜುಳಾ ಆದಿಕೇಶವುಲು ಅವರ ಸಾವಿಗೆ ಕಾರಣರಾದ ಬಿಜೆಪಿಯ

ಶಾಸಕ ನಾರಾಯಣಸ್ವಾಮಿಯ ವರ್ತನೆಯನ್ನು ಖಂಡಿಸಿ, ಶಿಕ್ಷಿಸುವುದಿರಲಿ, ತಮ್ಮ ಪಕ್ಷದ ನಾಯಕಿಯೊಬ್ಬಳ ಸಾವಿಗೆ ಯಾವುದೇ ರೀತಿಯ ಸಂತಾಪವನ್ನು ವ್ಯಕ್ತಪಡಿಸದ ಈ ಪಕ್ಷದ ದುರ್ವತನೆ ಅವರ ಮಹಿಳಾ ವಿರೋಧಿ ಧೋರಣೆಗೆ ಹಿಡಿದ ಕೈಗನ್ನಡಿಯಾಗಿದೆ.

ಇತ್ತೀಚೆಗೆ ರೂಪ್ ಕನ್ವರ್ ಪ್ರಕರಣದಲ್ಲಿ ವಿಶೇಷ ನ್ಯಾಯಾಲಯ ನೀಡಿರುವ ತೀರ್ಪು ಮಹಿಳಾ ಚಳುವಳಿಗೆ ಮತ್ತೊಂದು ದೊಡ್ಡ ಹೊಡೆತವಾಗಿದೆ. ರೂಪ್‌ಕನ್ವರ್ ಪ್ರಕರಣಕ್ಕೆ ಸಂಬಂಧಿಸಿ ಆಕೆಯ ಸಮೀಪದ ಬಂಧುಗಳನ್ನು ಪ್ರೇರಣೆ ನೀಡಿದವರನ್ನು, ಎಲ್ಲ ಸೇರಿ ಸುಮಾರು 42 ಮಂದಿಯನ್ನು ಆರೋಪಿಗಳನ್ನಾಗಿ ಮಾಡಲಾಗಿತ್ತು. ಆಕೆಯ ಸಮೀಪ ಬಂಧುಗಳಾದ ನಾಲ್ವರನ್ನು ಘಟನೆಗೆ ಕಾರಣರಾದವರೆಂದು ಬಂಧಿಸಲಾಗಿತ್ತು. ಕೆಲವರು ಸಾಕ್ಷಿ ಪುರಾವೆಗಳು ಸಾಲದೆಂಬ ಕಾರಣಕ್ಕೆ ಖುಲಾಸೆಯಾದರೆ, 'ಸತಿ' ಅವರ ಸಂಪ್ರದಾಯದ ಒಂದು ಅಂಗ, ಅದನ್ನು ಬದಲಾಯಿಸಲಾಗದು ಎಂಬ ಕಾರಣದಿಂದ ಮುಖ್ಯ ಆಪಾದಿತರು ಘಟನೆ ನಡೆದ ಒಂಭತ್ತು ವರ್ಷಗಳ ನಂತರ ದೋಷಮುಕ್ತರಾಗಿದ್ದರು. ಆದರೆ ಇತ್ತೀಚೆಗೆ ಸತಿ ವೈಭವೀಕರಣ ಪ್ರಕರಣದಲ್ಲಿ ಆರೋಪಿಗಳಾಗಿದ್ದವರನ್ನು ಸಾಕ್ಷ್ಯಾಧಾರಗಳು ಸಾಲದೆಂಬ ಕಾರಣಕ್ಕೆ ವಿಶೇಷ ನ್ಯಾಯಾಲಯ ದೋಷಮುಕ್ತರನ್ನಾಗಿಸಿದೆ.

1987ರಲ್ಲಿ ರೂಪ್‌ಕನ್ವರ್‌ಳು 'ಸತಿ'ಯಾದಾಗ ಈ ಘಟನೆ ಇಡೀ ದೇಶದುದ್ದಕ್ಕೂ ಸುದ್ದಿಯಾಯಿತು. ಈ ಘಟನೆಯನ್ನು ಖಂಡಿಸಿ ಇಂತಹ ಘಟನೆಗಳು ಮರುಕಳಿಸಬಾರದೆಂಬ ದೃಷ್ಟಿಯಿಂದ ಬಿಗಿಯಾದ ಕಾನೂನನ್ನು ತರುವಂತೆ ಮಹಿಳಾ ಸಂಘಟನೆಗಳು ಒತ್ತಾಯಿಸಿದುದರ ಪರಿಣಾಮವಾಗಿ ಅಂದಿನ ರಾಜಸ್ಥಾನ ಸರ್ಕಾರ ಸತಿ ಪದ್ಧತಿ (ನಿಷೇಧ) ಕಾನೂನನ್ನು ಜಾರಿಗೆ ತಂದಿತು. ಈ ಅಧಿನಿಯಮದಡಿ 'ಸತಿ'ಯ ಆತ್ಮಾಹುತಿಯನ್ನು ಆತ್ಮಹತ್ಯೆಯೆಂದು ಪರಿಗಣಿಸಿ 'ಸತಿ' ಹೋಗುವುದು ಅಪರಾಧವೆಂದು ಕರೆದರೂ ಅದಕ್ಕೆ ಸತಿಹೋಗುವವಳನ್ನೂ ದಂಡನೆಗೆ ಜವಾಬ್ದಾರಳನ್ನಾಗಿಸುತ್ತದೆ. ಆದರೆ ಈ ಕಾನೂನಿನಡಿ 'ಸತಿ'ಯ ವೈಭವೀಕರಣವನ್ನು 'ಸತಿಗೆ ದುಷ್ಪ್ರೇರಣೆ ನೀಡುವವರನ್ನೂ ದಂಡನೀಯ ಅಪರಾಧವನ್ನಾಗಿ ಪರಿಗಣಿಸಿರುವುದನ್ನು ಮಹಿಳಾ ಸಂಘಟನೆಗಳು ಸ್ವಾಗತಿಸಿದವು. 'ಸತಿ'ಯ ಚುನರಿ ಮಹೋತ್ಸವದಲ್ಲಿ ಅಂದಿನ ಬಿಜೆಪಿ ನಾಯಕರು ಮತ್ತು ಶಾಸಕರು ಭಾಗವಹಿಸಿದ್ದರೆಂಬುದು ಇತಿಹಾಸದ ಪುಟಗಳಿಂದ ಅಳಿಸಿ ಹೋಗುವುದಿಲ್ಲ. ಅಷ್ಟೇ ಅಲ್ಲದೆ ರೂಪ್‌ಕನ್ವರ್‌ಳ ಸತಿಯ ವಾರ್ಷಿಕೋತ್ಸವದ ಆಚರಣೆಗೆಂದು ವಿಜೃಂಭಣೆಯಿಂದ ನಡೆಸಲು ಉದ್ದೇಶಿಸಿದ್ದ ಭಗವದ್ಗೀತಾ ಪಠಣವನ್ನು ಕೂಡ ನಿಲ್ಲಿಸುವಂತೆ ಮಹಿಳಾ ಸಂಘಟನೆಗಳು ಸಲ್ಲಿಸಿದ್ದ ಅರ್ಜಿಯನ್ನು ಸುಪ್ರೀಕೋರ್ಟ್ ಗೌರವಿಸಿ ತಡೆಯಾಜ್ಞೆಯನ್ನು ನೀಡಿತ್ತು.

ಇಷ್ಟೆಲ್ಲ ಸುದ್ದಿಯಾದ ಈ ಘಟನೆಗೆ ಸಂಬಂಧಿಸಿದಂತೆ ನಲವತ್ತೆರಡು ಮಂದಿ ಆರೋಪಿಗಳನ್ನು ವಿಶೇಷ ನ್ಯಾಯಾಲಯ ಇತ್ತೀಚೆಗೆ ಬಂಧ ಮುಕ್ತರನ್ನಾಗಿಸಿತು. ಈ ಕ್ರಮದಿಂದಾಗಿ ಹದಿನೇಳು ವರ್ಷಗಳ ಹಿಂದೆ 'ಸತಿ' ಎನ್ನುವ ಧಾರ್ಮಿಕ ಹೆಸರಿನಲ್ಲಿ ಸಾರ್ವಜನಿಕವಾಗಿ ನಡೆದ ಹೆಣ್ಣೊಬ್ಬಳ ಹಗಲು ಕಗ್ಗೊಲೆ ಸಂಪೂರ್ಣವಾಗಿ ಮುಚ್ಚಿಹೋಯಿತು. ಯಾರೊಬ್ಬರಿಗೂ ಶಿಕ್ಷೆಯಾಗದೆ ಈ ಅನ್ಯಾಯದ ವಿರುದ್ಧ ಹೋರಾಡಿದವರೆಲ್ಲರನ್ನೂ ಬಾಯಿ ಮುಚ್ಚಿಸುವಂತಹ ತೀರ್ಪನ್ನು ನ್ಯಾಯಾಲಯ ಕೊಟ್ಟು ತನ್ನ ನಿಲುವು ಏನೆಂಬುದನ್ನು ಸ್ಪಷ್ಟ ಪಡಿಸಿದೆ.

ಈ ಸಂದರ್ಭದಲ್ಲಿ ನಮ್ಮೆಲ್ಲರನ್ನು ಕಾಡಬೇಕಾದ ಪ್ರಶ್ನೆಗಳು ಎರಡು - ಮೊದಲನೆಯದು, 1987ರಲ್ಲಿ 'ಸತಿ' ನಡೆಯಿತೆಂಬ ಘಟನೆಯ ಬಗ್ಗೆ ಸರ್ಕಾರಿ ವಕೀಲರು ಸಾಕಷ್ಟು ಸಾಕ್ಷ್ಯಾಧಾರಗಳನ್ನು ಒದಗಿಸಿಲ್ಲವಾದ್ದರಿಂದ ಘಟನೆ ನಡೆಯಿತೆಂಬುದೇ ಋಜುವಾತಾಗಿಲ್ಲದಿರುವಾಗ ಅದರ ವೈಭವೀಕರಣದ ಪ್ರಶ್ನೆಯೇ ಏಳುವುದಿಲ್ಲ ಎಂಬುದು ಒಂದು ವಾದವಾದರೆ, ಘಟನೆ ನಡೆದ ಒಂಭತ್ತು ವರ್ಷಗಳ ನಂತರ ಘಟನೆಗೆ ಸಂಬಂಧಿಸಿದ ನಾಲ್ವರು ಮುಖ್ಯ ಆರೋಪಿಗಳನ್ನು ಬಿಡುಗಡೆ ಮಾಡುವಾಗ ನ್ಯಾಯಾಲಯವು ಕೊಟ್ಟ ತೀರ್ಪಿನಲ್ಲಿ 'ಸತಿ' ಆ ಜನ ಸಮುದಾಯದ ಸಂಪ್ರದಾಯದ ಒಂದು ಮುಖ್ಯ ಭಾಗ ಎಂಬ ಅಂಶಕ್ಕೆ ಒತ್ತುಕೊಟ್ಟಿದೆ. ಬಿಜೆಪಿ ಸರ್ಕಾರವಿರುವ ರಾಜ್ಯದಲ್ಲಿ ಮಹಿಳೆಗೆ ದೊರೆತ ಮರ್ಯಾದೆಯಿದು.

ಈ ಎರಡೂ ಘಟನೆಗಳು ಮಹಿಳೆಯರ ಜೀವ ಎಷ್ಟೊಂದು ಅಗ್ಗವಾಗಿದೆ ಎಂಬ ಅಂಶದ ಕಡೆಗೆ ನಮ್ಮ ಗಮನ ಸೆಳೆಯುವುದಲ್ಲದೆ. ಸಾಮಾಜಿಕ ನ್ಯಾಯಕ್ಕಾಗಿ ಮಹಿಳೆ ನಡೆಸಬೇಕಾದ ಹೋರಾಟ ಎಷ್ಟೊಂದು ದೀರ್ಘ ನಡಿಗೆಯದು ಎಂಬ ಅಂಶದತ್ತಲೂ ನಮ್ಮ ಕಣ್ಣು ತೆರೆಸುತ್ತದೆ.

**- ಎನ್. ಗಾಯತ್ರಿ**

# ಅನಾಥ ಪ್ರಜ್ಞೆಯ ಆತ್ಮ ಸಂಗಾತ

- ಬರಗೂರು ರಾಮಚಂದ್ರಪ್ಪ

ಅಕ್ಕ ಮಹಾದೇವಿಯು ಶಿವನನ್ನೇ ಪತಿಯೆಂದು ಭಾವಿಸಿದ್ದು ಕೇವಲ ಭಕ್ತಿಯ ನೆಲೆಯಲ್ಲಿ ಅಲ್ಲ. ಅಕ್ಕನ ಬದುಕನ್ನು ಅರ್ಥಮಾಡಿಕೊಳ್ಳುತ್ತ ಹೋದಂತೆ ಆಕೆಯ ಭಾವನಾತ್ಮಕ ಹಾಗೂ ಬೌದ್ಧಿಕ ಪಲ್ಲಟಗಳು ಅಂದಿನ ಸಾಂಪ್ರದಾಯಿಕ ನೆಲೆಗಳಿಗೆ ಒಡ್ಡಿದ ಪರ್ಯಾಯಗಳಾಗಿವೆ ಎನ್ನಿಸುತ್ತದೆ. ಪತಿಯ ಕಲ್ಪನೆಯ ವಿಷಯದಲ್ಲೇ ಈ ಪರ್ಯಾಯದ ಹುಡುಕಾಟ ಸ್ಪಷ್ಟವಾಗಿದೆ. ನಮ್ಮ ಸಮಾಜದ ಸಾಂಪ್ರದಾಯಿಕ ನೆಲೆಗಳು ಪತಿಯನ್ನು ದೈವತ್ವಕ್ಕೇರಿಸಿವೆ. ಸತಿಯು ತನ್ನ ಪತಿಯನ್ನು ಪರಮದೈವವೆಂದು ಭಾವಿಸಿ ಭಯ ಭಕ್ತಿಯಿಂದ ನಡೆದುಕೊಳ್ಳಬೇಕಾಗುತ್ತದೆ. ಆದರೆ ಅಕ್ಕ ಮಹಾದೇವಿ ದೈವವನ್ನೇ ಪತಿಯಾಗಿಸಿಕೊಂಡದ್ದನ್ನು ಕಾಣಬಹುದು. ಪತಿಯನ್ನು ದೈವದ ನೆಲೆಗೆ ಕೊಂಡೊಯ್ಯುವ ಬದಲು 'ದೈವ'ವಾದ ಶಿವನನ್ನು ಪತಿಯ ನೆಲೆಗೆ ಕರೆತರುವ ಕಲ್ಪನೆಯಲ್ಲೇ ಒಂದು ವೈಚಾರಿಕ ಪಲ್ಲಟವಿದೆ. ಇಲ್ಲಿ ಪತಿಯ ಬಗ್ಗೆ ಭಯವಿಲ್ಲ; ಪರಮ ವಿಧೇಯತೆಯ ಭಕ್ತಿ ಪ್ರಧಾನವಾಗಿಲ್ಲ. ಭಕ್ತಿ ಮತ್ತು ಪ್ರೀತಿಗಳೊಂದಾದ ವಿಶಿಷ್ಟ ಭಾವನೆಗಳ ರೂಪಕ ಮನಸನ್ನು ನಾವಿಲ್ಲಿ ಕಾಣಬಹುದಾಗಿದೆ.

ಅಕ್ಕಮಹಾದೇವಿಯ ವೈವಾಹಿಕ ಜೀವನ ಕುರಿತು ಎರಡು ರೀತಿಯ ಅಭಿಪ್ರಾಯಗಳಿವೆ. ಎಂ.ಆರ್.ಶ್ರೀಯವರಾದಿಯಾಗಿ ಕೆಲವು ವಿದ್ವಾಂಸರು ಕೌಶಿಕ ರಾಜನೊಂದಿಗೆ ವಿವಾಹವಾಗಿತ್ತೆಂದೂ ರಂ. ಶ್ರೀ ಮುಗಳಿಯವರಾದಿಯಾಗಿ ಕೆಲವು ವಿದ್ವಾಂಸರು ಅಧಿಕೃತ ವಿವಾಹ ಆಗಿರಲಿಲ್ಲವೆಂದೂ ಅಭಿಪ್ರಾಯ ಪಡುತ್ತಾರೆ. ಆದರೆ ಈ ಎರಡು ವಿದ್ವತ್ ತಂಡಗಳೂ ಕೌಶಿಕ ರಾಜನ ಬಳಿ ಅಕ್ಕ ಇದ್ದದ್ದನ್ನು ಅಲ್ಲಗಳೆಯುವುದಿಲ್ಲ. ಕೌಶಿಕ ರಾಜನು ತನ್ನನ್ನು ವರಿಸಲು ಇಷ್ಟವಿಲ್ಲದ ಅಕ್ಕನನ್ನು ಬಲತ್ಕಾರದಿಂದ ಅಥವಾ ಒತ್ತಾಯದಿಂದ ಅರಮನೆಗೆ ಕರೆತಂದ ಉಲ್ಲೇಖಗಳೂ ಇವೆ. ಕೌಶಿಕನನ್ನು ನಿರಾಕರಿಸಿ, ತೊರೆದು ಹೊರ ಬಂದ, ಅಕ್ಕ ತನ್ನ ಪತಿಯನ್ನು ಆಯ್ಕೆಗೆ ವಿಶಿಷ್ಟ ಆಯಾಮ ಲಭ್ಯವಾಗುತ್ತದೆ. ಶಿವನನ್ನು ಪತಿಯೆಂದು ಭಾವಿಸಿ ತನ್ಮಯವಾಗುವ, ತೊಡಗಿಸಿಕೊಳ್ಳುವ ಪ್ರೀತಿಯ ಪ್ರಕ್ರಿಯೆಯು ರಾಜಪ್ರಭುತ್ವಕ್ಕೆ, ಆಸ್ತಿ ಮತ್ತು ಅಧಿಕಾರಕ್ಕೆ, ಪುರುಷ ಪ್ರಧಾನತೆಗೆ, ಒಟ್ಟು ಸಾಂಪ್ರದಾಯಿಕತೆಗೆ ಒಡ್ಡಿದ ಪರ್ಯಾಯವಾಗಿ ನನಗೆ ಕಾಣಿಸುತ್ತದೆ. 'ನನ್ನ ಗಂಡ ಚೆನ್ನಮಲ್ಲಿಕಾರ್ಜುನ ದೇವರಲ್ಲದೆ, ಮಿಕ್ಕಿದ ಗಂಡಸರೆಲ್ಲ ಮುಗಿಲ ಮರೆಯ ಬಣ್ಣದ ಬೊಂಬೆಯಂತೆ' ಎಂದು ಸ್ಪಷ್ಟಪಡಿಸುವ ಅಕ್ಕನ ಪ್ರೀತಿ ಪಾತ್ರ 'ಚೆನ್ನಮಲ್ಲಿಕಾರ್ಜುನ' ಕೇವಲ ಭಕ್ತಿ ಸ್ವೀಕಾರದ ದೈವವಲ್ಲ; ಒಂದು ಪರ್ಯಾಯ ಪ್ರತೀಕ.

ಆದ್ದರಿಂದ ಅಕ್ಕನ ಪತಿಯ ಕಲ್ಪನೆಯನ್ನು ಅಲೌಕಿಕ ಭಾವ ವಲಯದಲ್ಲಿ ಬಂಧಿಸುವುದು ಸರಿಯೆನಿಸುವುದಿಲ್ಲ. ಅಕ್ಕನ ಕೆಲವು ವಚನಗಳು ಲೌಕಿಕಾನುಭವದಲ್ಲಿ ಶಿವ ಸಂಸಾರದ ಸೆಳೆತವನ್ನು ಅತ್ಯಂತ ಸ್ಪಷ್ಟವಾಗಿ ಹೇಳುತ್ತದೆ. ಲೌಕಿಕದ ಕಳವಳ-ತಳಮಳಗಳನ್ನು ಬದಿಗೊತ್ತಿ ಸುಳ್ಳು ಶಾಂತಿಯನ್ನು ನಟಿಸುವುದು ಅಕ್ಕಮಹಾದೇವಿಯ ವ್ಯಕ್ತಿತ್ವಕ್ಕೆ ಒಗ್ಗದ ಸ್ವಭಾವ. 'ಒಡಲ ಕಳವಳಕ್ಕಾಗಿ ಅಡವಿಯ ಹೊಕ್ಕೆನು/ಗಿಡುಗಿಡು ದಪ್ಪದೆ ಬೇಡಿದೆ ನೆನ್ನಂಗಕ್ಕೆಂದು/ ಅವು ನೀಡಿದವು ತಮ್ಮ ಲಿಂಗಕ್ಕೆಂದು' ಎಂದು ಹೇಳುವಾಗ ಒಡಲ ಕಳವಳದ ವಾಸ್ತವಕ್ಕೆ ಅಕ್ಕ ಎಂದೂ ವಂಚನೆ ಮಾಡುವುದಿಲ್ಲ. ಮಾನಸಿಕ ಸತ್ಯಕ್ಕೆ ವಂಚನೆ ಮಾಡದ ಶುದ್ಧ ಪ್ರಾಮಾಣಿಕತೆಯೇ ಅಕ್ಕನ ಶ್ರೇಷ್ಠತೆ. ಚೆನ್ನಮಲ್ಲಿಕಾರ್ಜುನ ಎಂಬ 'ಅಲೌಕಿಕ'ವು ಅಕ್ಕನಲ್ಲಿ 'ಲೌಕಿಕ'ವಾಗಿ ಸಹಜಾಭಿವ್ಯಕ್ತಿ ಪಡೆಯುವ ವಿಧಾನವೇ ಒಂದು ವಿಶಿಷ್ಟತೆ. 'ಕಾಯದ ಕಳವಳವ ಕೆಡಿಸಯ್ಯ' ಎಂದಾಗ ಇಲ್ಲಿ ಮಾಯದ ಮದ ಒಳಸೇರಿ ಅದನ್ನು ಮೀರುವ ಪ್ರಯತ್ನದಲ್ಲೇ ತುಮುಲ, ತಳಮಳಗಳು ಕಾಡಿಸುತ್ತವೆ. ಆಗ 'ಸುಳಿದು ಬೀಸುವ ಗಾಳಿ ಉರಿಯಾಯಿತವ್ವ/ ಬೆಳದಿಂಗಳು ಬಿಸಿಲಾಯಿತ್ತು ಕೆಳದಿ' ಎಂದು ಕೊರಗುತ್ತ 'ಹೊಳಲ ಸುಂಕಿಗನಂತೆ ತೊಳಲುತ್ತಿದ್ದೆನವ್ವ' ಎಂಬ ಸಂಕಟ ಸುಡುತ್ತದೆ. ವಿರಹ ಉಕ್ಕಿ ಬರುತ್ತದೆ. ಉಕ್ಕುವ ವಿರಹವನ್ನು ಹತ್ತಿಕ್ಕುವ ಒಳತೋಟಿಯಲ್ಲಿ ಹುಟ್ಟಿದ ನುಡಿಗಳ ಪ್ರಾಮಾಣಿಕತೆ ಅನನ್ಯವಾದುದು.

*'ಒಮ್ಮೆ ಕಾಮನ ಕಾಲು ಹಿಡಿವೆ*
*ಒಮ್ಮೆ ಚಂದ್ರಮಂಗೆ ಸೆರಗೊಡ್ಡಿ ಬೇಡುವೆ*
*ಸುಡು ವಿರಹವನ್ನು ಆರಿಗೆ ಧೃತಿಗೆಡುವೆ*
*ಚನ್ನಮಲ್ಲಿಕಾರ್ಜುನ ದೇವನೆನ್ನನೊಲ್ಲದ*
*ಕಾರಣ ಎಲ್ಲರಿಗೆ ಹಂಗಿತಿಯಾದೆನವ್ವ'*

ಕಾಮನ ಕಾಲ ಹಿಡಿವೆ. ಚಂದ್ರಮಗೆ ಸೆರಗೊಡ್ಡಿ ಬೇಡುವೆ

- ಎಂಬ ಸಾಲುಗಳು ಹೊತ್ತು ತರುವ ಸಂಕಟಮಯ ಮಾನಸಿಕ ಇತಿಹಾಸವನ್ನು ಬೇರೆ ಯಾವ ಪದಗಳಲ್ಲಿ ಹೇಳಲು ಸಾಧ್ಯ? ವಿರಹದಿಂದ ಹೊರಬರಲು ಯತ್ನಿಸುವ ಯಾತನೆಯ ಒತ್ತಡಕ್ಕೆ ಸಿಕ್ಕಿದ ಮೂಕ ಆಕ್ರಂದನಕ್ಕೆ ಈ ಸಾಲುಗಳಷ್ಟೇ ಸಾಕಲ್ಲವೇ? ಹೇಳಿಕೊಳ್ಳಲಾಗದ ಯಾತನೆಯ ಅನುಭವಕ್ಕಾಗಿ ಮುಂದಿನ ಸಾಲುಗಳನ್ನು ಗಮನಿಸಿ.

*'ಕಿಚ್ಚಿಲ್ಲದ ಬೇಗೆಯಲ್ಲಿ ಬೆಂದೆನವ್ವ*
*ಏರಿಲ್ಲದ ಘಾಯದಲ್ಲಿ ನೊಂದೆನವ್ವ*
*ಸುಖವಿಲ್ಲದೆ ಧಾವತಿಗೊಂಡೆನವ್ವ'*

ಅಕ್ಕನ ಒಳ ಉರಿಯ ಅವ್ಯಕ್ತ ಭಾವ ಲಯವು 'ಕಿಚ್ಚಿಲ್ಲದ ಬೇಗೆ' ಮತ್ತು ಏರಿಲ್ಲದ ಘಾಯ'ವಾಗಿದೆ. ಹೊರಗೆ ಗೋಚರವಲ್ಲ; ಆದರೆ ಒಳಗೆ ಉರಿಯುವುದು ನಿಂತಿಲ್ಲ. ಅಕ್ಕನನ್ನು ಅಲೌಕಿಕ ಭಕ್ತಿಯಲ್ಲಿ ಬಂಧಿಸಿದರೆ ಒಳಗಿನ ಭಾವ ಪ್ರಪಂಚವನ್ನು ಮರೆಮಾಚಿದಂತಾಗುತ್ತದೆ. ಈ ಉದಾಹರಣೆಗಳ ಮೂಲಕ ನಾನು ಹೇಳಬಯಸುವುದು - ಕನ್ನಡದ 'ಅಪ್ಪಟ ಅನುಭವದ ಕವಯತ್ರಿ ಅಕ್ಕಮಹಾದೇವಿಯನ್ನು ಭಕ್ತೆಯಾಗಿಸುವ ಮೊದಲು ಹೆಣ್ಣಾಗಿಸಿ ನೋಡೋಣ: ಒಂದು ಮನುಷ್ಯ ಮನಸ್ಸಾಗಿ ಆಕೆಯನ್ನು ಅರ್ಥ ಮಾಡಿಕೊಳ್ಳೋಣ. ಲೌಕಿಕಾನುಭವದಲ್ಲಿಯೇ ಅಕ್ಕನ ಅನುಭವಗಳು ಕಟ್ಟಿಕೊಳ್ಳುತ್ತ ಅಲೌಕಿಕ ಮತ್ತು ಲೌಕಿಕಗಳ ಅಂತರವನ್ನು ಇಲ್ಲವಾಗಿಸುತ್ತ ಪುರುಷ ಪ್ರಧಾನೆಗೆ ಪರ್ಯಾಯ ಕಟ್ಟುವ ಕಳವಳದ ಕಣ್ಣಾಗಿ ಪರಿಭಾವಿಸೋಣ. 'ಚೆನ್ನಮಲ್ಲಿಕಾರ್ಜುನ' ಎಂಬ ಅಂಕಿತವು 'ದೈವ'ವಾಗುವ ಬದಲು ಸಾಂಪ್ರದಾಯಿತ ಪುರುಷ ಪ್ರಭುತ್ವಕ್ಕೊಂದು ಪರ್ಯಾಯದ ಗುರಿಯಾಗಿದೆಯೆಂಬುದನ್ನು ಅರ್ಥ ಮಾಡಿಕೊಳ್ಳೋಣ. ಲೌಕಿಕಾನುಭವಗಳಲ್ಲೇ ಚೆನ್ನಮಲ್ಲಿಕಾರ್ಜುನನ ಜೊತೆಗಿನ ಸಂಬಂಧಗಳು ಅನಾವರಣಗೊಳ್ಳುವುದನ್ನು ನೋಡಿದರೆ ಅಕ್ಕನ ಲೌಕಿಕ ಬೇರುಗಳ ಗಾಢತೆ ಅರಿವಾಗುತ್ತದೆ.

*'ಕಾಣುತ್ತ ಕಾಣುತ್ತ*
*ಕಂಗಳ ಮುಚ್ಚಿದೆ ನೋಡವ್ವ*
*ಕೇಳುತ್ತ ಕೇಳುತ್ತ*
*ಹಾಸಿದ ಹಾಸಿಗೆಯ ಹಂಗಿಲ್ಲದೆ ಹೋಯಿತ್ತು ಕೇಳವ್ವ*
*ಕೂಡುವ ಕೂಟವ ನಾನೇನೆಂದರಿಯದೆ*
*ಮರೆದೆ ಕಾಣವ್ವ*

ಎಂದು ಹೇಳಿಕೊಳ್ಳುವ ಖಾಸಗಿತನದಲ್ಲಿ ಹಾಗೂ 'ಅಕ್ಕ ಕೇಳಕ್ಕ ಆನೊಂದು ಕನಸ ಕಂಡೆ ಚಿಕ್ಕ ಚಿಕ್ಕ ಜಡೆಯ ಸುಲಿಪಲ್ಲ ಗೊರವನು/ ಬಂದೆನ್ನ ನೆರದ ನೋಡವ್ವ/ ಆತನನ್ನಪ್ಪಿಕೊಂಡು ತಳವೆಳಗಾದೆನೆಲಗೇ/' ಎಂಬ ಏಕಾಂತದ ಗಂಡು-ಹೆಣ್ಣಿನ ಅನುಭವದ ಮೂಲಕ ಶಿವ ಸಂಬಂಧವನ್ನು ಬಿಚ್ಚಿಡುವ ರೀತಿಯಲ್ಲಿ, ಅಕ್ಕಮಹಾದೇವಿ ಅನೇಕರಿಗೆ ವಿಚಿತ್ರವಾಗಿ ಕಂಡಿರಲಿಕ್ಕೆ ಸಾಧ್ಯ. ಅಕ್ಕನ ವಿಶಿಷ್ಟತೆ ಇರುವುದೇ ಇಲ್ಲಿ, ಅಲೌಕಿಕವನ್ನು ಲೌಕಿಕದಲ್ಲಿಟ್ಟು ಸತ್ಯ ಶೋಧಿಸಿದ ಅಪರೂಪದ ಹಾಗೂ ಅಸಾಧಾರವುವಾದ ಅನುಭವ ಪ್ರತೀಕವೇ ಅಕ್ಕಮಹಾದೇವಿ.

ಇಲ್ಲಿ ಇನ್ನೊಂದು ಅಂಶವನ್ನೂ ಗಮನಿಸಬೇಕು. ಅಕ್ಕನ ವಚನಗಳಲ್ಲಿ ಪುರುಷ ಸಂಬೋಧನೆ ಇರುವುದು ತುಂಬಾ ಕಡಿಮೆ. ಇಲ್ಲವೆನ್ನುವಷ್ಟು ಅಲ್ಲ, ಆಕೆಯ ಅಂತರಂಗದ ಭಾವನೆಗಳನ್ನು ಬಿಚ್ಚಿಡುವಾಗ ಬರುವ ಏಕೈಕ ಪುರುಷ ಸಂಬೋಧನೆಯೆಂದರೆ - ಚೆನ್ನಮಲ್ಲಿಕಾರ್ಜುನ. ಉಳಿದಂತೆ ಬಹುಪಾಲು ಸ್ತ್ರೀ ಸಂಬೋಧನೆಯು ಆವರಿಸಿಕೊಳ್ಳುತ್ತದೆ. ಅಕ್ಕ, ಅವ್ವ, ಕೆಳದಿ-ಹೀಗೆ ಸ್ತ್ರೀಯನ್ನು ಉದ್ದೇಶಿಸಿಯೇ ತನ್ನ ಅಂತರಂಗದ ಅನುಭವಗಳನ್ನು ಹಂಚಿಕೊಳ್ಳುವುದು ಅಕ್ಕಮಹಾದೇವಿಯ ವಿಶಿಷ್ಟ ಕ್ರಮ. ಪುರುಷ ಪ್ರಧಾನ ಸಮಾಜದ ಜೊತೆ ಹಂಚಿಕೊಳ್ಳಲಾಗದ ಅನುಭವಗಳನ್ನು ಸ್ತ್ರೀ ಸಂಬೋಧನೆಯ ಮೂಲಕ ತನಗೆ ತಾನೇ ಹೇಳಿಕೊಳ್ಳುವುದು ಒಂದು ಸಂಕಟಮಯ ಪಯಣವೇ ಸರಿ. ಜೊತೆಗೆ ಪುರುಷ ಪ್ರಧಾನ ಸಮಾಜಕ್ಕೆ ಕೊಟ್ಟುಕೊಂಡ ಯಾತನೆಯ ಉತ್ತರವೂ ಹೌದು.

ಮತ್ತೊಂದು ಮುಖ್ಯ ಅಂಶವನ್ನು ನಾವು ಗಮನಿಸಬೇಕು. ಅಕ್ಕನ ಖಾಸಗಿ ಅನುಭವಗಳು ಅವ್ವ, ಅಕ್ಕ ಹಾಗೂ ಕೆಳದಿಯರನ್ನು ಉದ್ದೇಶಿಸಿ ಅನಾವರಣಗೊಳ್ಳುತ್ತ ಹೋದರೆ, ಚೆನ್ನಮಲ್ಲಿಕಾರ್ಜುನನ ಹುಡುಕಾಟದ ಸಂದರ್ಭದಲ್ಲಿ ನಿಸರ್ಗ ಸಂಬೋಧನೆ ಮುಖ್ಯವಾಗುತ್ತದೆ. ನಿಸರ್ಗದ ಮರ ಗಿಡಗಳು, ಪ್ರಾಣಿಪಕ್ಷಿಗಳು ಅಕ್ಕನ ಅಂಗಲಾಚುವಿಕೆಯ ಕೇಂದ್ರವಾಗುತ್ತವೆ. ಮನುಷ್ಯ ಯಾವಾಗ ನಿಸರ್ಗದ ಜೊತೆ ತನ್ನ ಅಂತರಂಗವನ್ನು ಬಿಚ್ಚಿಡುವುದು ಎಂಬ ಪ್ರಶ್ನೆ ನನಗೆ ಮುಖ್ಯವೆನಿಸುತ್ತದೆ. ಮನುಷ್ಯರಲ್ಲಿ ಹಂಚಿಕೊಳ್ಳಲಾಗದ ಉಸಿರುಕಟ್ಟುವ ವಾತಾವರಣದಲ್ಲಿ ಹುಟ್ಟುವ ಅನಾಥ ಪ್ರಜ್ಞೆ ಅಥವಾ ಪರಕೀಯತೆಯು ಮರ ಗಿಡಗಳ ಮೊರೆ ಹೋಗುತ್ತದೆ. ಪ್ರಾಣಿ ಪಕ್ಷಿಗಳಲ್ಲಿ ಪ್ರೀತಿಯ ನೆಲೆಯನ್ನು ಕಾಣುತ್ತದೆ. ತನ್ನ ಸ್ವತಂತ್ರ ಹಾಗೂ ಸ್ವೋಪಜ್ಞ ಸ್ವಭಾವ ಹಾಗೂ ನಡವಳಿಕೆಗಳಿಗೆ ಒಗ್ಗದ ಸಮಾಜದಲ್ಲಿ ಅಂತರಂಗಿಕ ಅನಾಥ ಪ್ರಜ್ಞೆಗೆ ಸಿಲುಕಿದ ಅಕ್ಕಮಹಾದೇವಿ 'ಗಿಡುಗಿಡುದಪ್ಪದೆ ಬೇಡಿ'ದಲ್ಲದೆ ಗಿಳಿ, ಹಂಸೆ,

ನವಿಲುಗಳ ಜೊತೆ ಮಾತಾಡತೊಡಗುವುದು ಅಂದಿನ ಹೊಸ ಹಾದಿಯೇ ಸರಿ; ಇದು ಒಳಗಿನ ಹಾದಿಯೂ ಹೌದು.

*'ಚಲಿಮಿಲಿ ಎಂದೋದುವ ಗಿಳಿಗಳಿರಾ*
*ನೀವು ಕಾಣಿರೇ? ನೀವು ಕಾಣಿರೇ?*
*ಸರವರದೊಳಗಾಡುವ ಹಂಸೆಗಳಿರಾ*
*ನೀವು ಕಾಣಿರೇ? ನೀವು ಕಾಣಿರೇ?*

ಎಂದು ಕೇಳುತ್ತ ಹೋಗುವ ಅಕ್ಕಮಹಾದೇವಿ ಗಿಳಿ, ಹಂಸೆಗಳ ಜೊತೆಗೆ ಸಂಬೋಧನೆ ಮಾಡುವುದು ಕೋಗಿಲೆ ಮತ್ತು ನವಿಲುಗಳಂತಹ ಕೋಮಲ ಜೀವಿಗಳನ್ನು ಎಂಬ ಅಂಶ ವಿಚಾರಯೋಗ್ಯ. ಗಿಳಿ, ಹಂಸೆ, ಕೋಗಿಲೆ, ನವಿಲು, ದುಂಬಿ, ಬೆಳದಿನಗಳು ಇವುಗಳನ್ನು ಉದ್ದೇಶಿಸಿ ಕೇಳಿಕೊಳ್ಳುವ ಮನಸ್ಥಿತಿ ತಾನಾಗಿಯೇ ಅರ್ಥವಾಗುವಂತಹುದು. ಇಲ್ಲಿ ಮನುಷ್ಯರಿಲ್ಲ; ಪ್ರೀತಿ ಪ್ರೇಮದ ಸಂಕೇತವಾದ ಪಕ್ಷಿಗಳಿವೆ: ಬೆಳದಿಂಗಳಿದೆ: ಹಾಗಾದರೆ ಅಕ್ಕನ ಮನೋಭೂಮಿಕೆಯಲ್ಲಿ ಹುಟ್ಟಿದ ಪರಕೀಯತೆಯ ಮೂಲ ಇರುವುದು ಪ್ರೀತಿ ಪ್ರೇಮಗಳು ಸಿಕ್ಕದ ಸಾಮಾಜಿಕ ವಲಯದಲ್ಲಿ ಅಲ್ಲವೇ? ಕಾಠಿಣ್ಯ ಹಾಗೂ ಕ್ರೌರ್ಯಗಳಿಗೆ ಪರ್ಯಾಯವಾಗಿ ಕೋಮಲ ಸಂಕೇತಗಳೊಂದಿಗೆ ಸಂವಾದಿಸುವ ವಿಧಾನವನ್ನು ಕಂಡುಕೊಂಡ ಅಕ್ಕಮಹಾದೇವಿ ಹೊಸ ಹಾದಿಯನ್ನು ತುಳಿದ ಎಲ್ಲ ಸಂಕಟ ಹಾಗೂ ಸವಾಲುಗಳ ಸಮರ್ಥ ಸಂಕೇತವಾಗಿ, ಚಾರಿತ್ರಿಕ ಮಹತ್ವದ ಮನುಷ್ಯ ಪ್ರತೀಕವಾಗಿ ನನಗೆ ಕಾಣಿಸುವುದುಂಟು. ಆಕೆಯ ಅನೇಕ ವಚನಗಳಲ್ಲಿ ಅಪ್ಪಟ ಆಂತರಂಗಿಕ ಅನುಭವಗಳಿವೆ; ಅರಳುತ್ತಲೇ ನರಳುವ ಹೂವುಗಳಿವೆ: ಆತ್ಮನಿವೇದನೆಯ ವಿವಿಧ ವಿಧಾನಗಳಿವೆ.

ಅನುಭವ ನಿವೇದನೆಯ ಒಂದು ಹಂತದಲ್ಲಿ ಅಕ್ಕಮಹಾದೇವಿ 'ಆತ್ಮ ಸಂಗಾತ'ದ ಮಾತುಗಳನ್ನು ಸಾದರಪಡಿಸಿರುವುದನ್ನು ಗಮನಿಸಿದಾಗ, ವೈಯಕ್ತಿಕ ಬದುಕಿನ ಹೊಸ ಹೊಳಹೊಂದು ಗೋಚರಿಸುತ್ತದೆ. ಚೆನ್ನಮಲ್ಲಿಕಾರ್ಜುನ ಮತ್ತು ತನ್ನ ಸಂಬಂಧವನ್ನು 'ಆತ್ಮ ಸಂಗಾತ'ದ ನೆಲೆಯಲ್ಲಿ ಪರಿಭಾವಿಸುವ ಕ್ರಮದಲ್ಲಿ ತನಗೆ ತಾನೇ ಕರುಳೊಡೆಯುವ ಕಾಯದ ಕಳವಳ ಮತ್ತು ಅದನ್ನು ಮೀರುವ ಹೋರಾಟ ಒಂದು ಹೊಸ ಮಾನಸಿಕ ಲೋಕವನ್ನೇ ತೆರೆಯುತ್ತದೆ. ಆದ್ದರಿಂದ ಅಕ್ಕಮಹಾದೇವಿಯಲ್ಲಿರುವ 'ಸಂವೇದನಾಶೀಲ ಸ್ವೋಪಜ್ಞ ಸ್ತ್ರೀ'ಯನ್ನು ನಿರ್ಲಕ್ಷ ಮಾಡಿ, ಶಿವಭಕ್ತೆಯೆಂದಷ್ಟೇ ವಿಜೃಂಭಿಸುವುದು 'ಆತ್ಮ ಸಂಗಾತ'ಕ್ಕೆ ಮಾಡಿದ ಅನ್ಯಾಯವಾಗುತ್ತದೆ. ರಾಜ ಪ್ರಭುತ್ವ, ಪುರುಷ ಪ್ರಭುತ್ವ, ಸಂಪ್ರದಾಯ ಮತ್ತು ಸಂಪತ್ತುಗಳಿಗೆ ಎದುರಾಗಿ ಹೊಸ ಪರ್ಯಾಯದ ಪ್ರತೀಕವಾಗುತ್ತ ಪರಕೀಯತೆಯ ಅನುಭವದಲ್ಲಿ ತನ್ನೊಳಗೆ ತಾನು ಆತ್ಮ ಸಂಗಾತಕ್ಕೆ ತೊಡಗಿದ ವೈಯಕ್ತಿಕ ಹಾಗೂ ಸಾಮಾಜಿಕ ಶಕ್ತಿಯನ್ನು ಕೇವಲ 'ಭಕ್ತ' ಎಂದಷ್ಟೇ ಹೇಳಿದರೆ ಏನೂ ಹೇಳಿದಂತೆ ಆಗುವುದಿಲ್ಲ.

*'ತೆರಣಿಯ ಹುಳು ತನ್ನ ಸ್ನೇಹದಿಂದ*
*ಮನೆಯ ಮಾಡಿ! ತನ್ನ ನೂಲು ಸುತ್ತಿ ಸುತ್ತಿ*
*ಸಾವ ತೆರನಂತೆ!*
*ಮನ ಬಂದುದ ಬಯಸಿ ಬಯಸಿ*
*ಬೇವುತ್ತಿರುವೆನಯ್ಯ! ಅಯ್ಯಾ,*
*ಎನ್ನ ಮನದ ದುರಾಶೆಯ ಮಾಣಿಸಿ*
*ನಿಮ್ಮತ್ತ ತೋರಾ.*

ಎಂದು ಚೆನ್ನಮಲ್ಲಿಕಾರ್ಜುನನನ್ನು ಕೇಳುವ ಕಳವಳದ ಜೀವಗಳು ಆಧುನಿಕ ಸಂದರ್ಭದಲ್ಲೂ ಇರುವುದನ್ನು ಕಂಡುಕೊಂಡರೆ ಅದು ಅಕ್ಕನನ್ನು ಅರ್ಥಮಾಡಿಕೊಳ್ಳುವ ಒಂದು ವಿಧಾನ; ಅಕ್ಕನ ವಚನಗಳೊಂದಿಗೆ ನಡೆಸುವ ಒಂದು ಅನುಸಂಧಾನ.

**- ಕೃಪೆ: ಮಹಿಳಾ ಅಧ್ಯಯನ**

ರಾಜಕೀಯ ರಂಗಕ್ಕೆ ಹೆಚ್ಚು ಮಹಿಳೆಯರು ಬಂದಾಕ್ಷಣ ಅದು ರಾಜಕೀಯವನ್ನು ಶುದ್ಧ ಗೊಳಿಸುತ್ತದೆ ಎನ್ನುವುದಕ್ಕೆ ಸಾಧ್ಯವಿಲ್ಲ. ರಾಜಕೀಯ ಶುದ್ಧತೆ ಎನ್ನುವುದು ವ್ಯಕ್ತಿಯ ರಾಜಕೀಯ ಮೌಲ್ಯವನ್ನು ಆಧರಿಸಿರುತ್ತದೆ.

**- ಮಾಲಿನಿ ಭಟ್ಟಾಚಾರ್ಯ**
ಮಾಜಿ ಸಂಸತ್ ಸದಸ್ಯೆ (ಸಿ.ಪಿ.ಎಂ.)

# ವ್ಯವಸ್ಥೆ ಮತ್ತು ಮಹಿಳಾ ಬರಹ

- ಡಾ. ಸಬೀಹಾ ಭೂಮಿಗೌಡ

ವ್ಯವಸ್ಥೆ ಎನ್ನುವಾಗ ಅದು ಸಾಮಾಜಿಕ ವ್ಯವಸ್ಥೆಯಾಗಿರಬಹುದು, ಧಾರ್ಮಿಕ, ರಾಜಕೀಯ, ಆರ್ಥಿಕ, ಆಡಳಿತಾತ್ಮಕ ಮುಂತಾಗಿ ವಿವಿಧ ವ್ಯವಸ್ಥೆಗಳೂ ಆಗಿರಬಹುದು. ಸಮಾಜ ಜೀವಿಯಾದ ಪ್ರತಿಯೋರ್ವರ ವ್ಯಕ್ತಿತ್ವ, ನಿರ್ಮಾಣದಲ್ಲಿ ಈ ಎಲ್ಲ ವ್ಯವಸ್ಥೆಗಳ ಪಾಲೂ ಗಣನೀಯವಾಗಿರುತ್ತದೆ ಎಂಬುದರಲ್ಲಿ ಭಿನ್ನಮತ ಇರಲಾರದು. 'ಹೆಣ್ಣು ಹೆಂಗಸಾಗುವುದು ಮತ್ತು ಗಂಡು ಗಂಡಸಾಗುವುದು' ಈ ಸಾಮಾಜೀಕರಣದ ಫಲವಾಗಿ ಎಂಬುದನ್ನು ಸ್ತ್ರೀವಾದ ಪ್ರತಿಪಾದಿಸುತ್ತದೆ. ಅಂತೆಯೇ ಸ್ತ್ರೀ-ಪುರುಷರ ಚಿಂತನೆಗಳು, ಧ್ಯೇಯಗಳು, ಕನಸುಗಳು, ನಂಬಿಕೆಗಳು ಮತ್ತು ಒಟ್ಟಾಗಿ ಜೀವನಕ್ರಮಗಳು ಅವರು ಬದುಕುತ್ತಿರುವ ಕಾಲದ ಮತ್ತು ಸಾಮಾಜಿಕ ವ್ಯವಸ್ಥೆಯ ನೆಲೆಗಳಿಂದ ನಿರ್ಧರಿತವಾಗುತ್ತವೆ. ಇದು ಭಾಷಿಕ ನೆಲೆಯಲ್ಲಿ ಸ್ಪಷ್ಟವಾದ ಅಭಿವ್ಯಕ್ತಿಯನ್ನು ಪಡೆದುಕೊಂಡಿದೆ. ಪುರುಷರ ಭಾಷಾ ನಮೂನೆಯಲ್ಲಿ ಖಚಿತತೆ, ನಿರ್ದೇಶನ ಮತ್ತು ಅಧಿಕಾರ ಸೂಚಕ ಕ್ರಿಯಾಪದಗಳು ಹೇರಳವಾಗಿ ಕಂಡು ಬಂದರೆ, ಮಹಿಳೆಯರ ಭಾಷಾ ನಮೂನೆಯಲ್ಲಿ ಅಸ್ಪಷ್ಟತೆ, ವಿಧೇಯತೆ ಹಾಗೂ ಅನುಮೋದನೆ ನಿರೀಕ್ಷೆಯ ಕ್ರಿಯಾಪದಗಳು ಸಹಜವೆಂಬಂತೆ ನುಸುಳುತ್ತವೆ. ಕಾರಣ ಕೇಳದಿದ್ದಾಗಲೂ, ಪ್ರಶ್ನೆಗೆ ಉತ್ತರಿಸುವ ಮೊದಲೇ ಕಾರಣ ನೀಡುವುದು ಮಹಿಳೆಯರಲ್ಲಿ ಕಂಡು ಬರುವುದಕ್ಕೆ ವ್ಯವಸ್ಥೆಯಲ್ಲಿ ಸದಾ ಇನ್ನೊಬ್ಬರಿಗೆ ಉತ್ತರಿಸಬೇಕಾದ, ಅಥವಾ ಸದಾ ತಮ್ಮ ನಿಲುವನ್ನು ಸಮರ್ಥಿಸಿಕೊಳ್ಳಬೇಕಾದ ಅನಿವಾರ್ಯತೆಯ ನೆಲೆಯಲ್ಲಿ ಮಹಿಳೆಯರು ಉಳಿದಿರುವುದೇ ಕಾರಣವಾಗಿದೆ. ಹೀಗಿರುವಾಗ ವ್ಯಕ್ತಿಯ ಅಭಿವ್ಯಕ್ತಿ ಮಾಧ್ಯಮಗಳಲ್ಲಿ ಒಂದಾದ ಬರಹ ಈ ಎಲ್ಲ ವ್ಯವಸ್ಥೆಗಳ ಪ್ರಭಾವಗಳಿಂದ ಹೊರಗೆ ಉಳಿಯಲು ಸಾಧ್ಯವಿಲ್ಲ. ಈ ಹಿನ್ನೆಲೆಯಿಂದಲೇ ವ್ಯವಸ್ಥೆ ಮತ್ತು ಮಹಿಳಾ ಬರಹದ ಇತಿಮಿತಿಗಳತ್ತ ಅವಲೋಕನ ಮಾಡುವುದು ನನ್ನ ಆಸಕ್ತಿಯಾಗಿದೆ.

ಹೀಗೆ ವ್ಯವಸ್ಥೆಯು ಮಹಿಳಾ ಬರಹಗಳ ಮೇಲೆ ಪ್ರಭಾವ ಬೀರಿದೆ ಮತ್ತು ಬೀರುತ್ತದೆ ಎಂಬುದನ್ನು ಒಪ್ಪಿಕೊಂಡ ನಂತರ ಎದುರಾಗುವ ಪ್ರಶ್ನೆ - ವ್ಯವಸ್ಥೆಯ ಪ್ರಭಾವ ಮಹಿಳೆಯರ ಬರಹಗಳಿಗೆ ಇತಿಮಿತಿಗಳನ್ನು ನಿರ್ಮಾಣ ಮಾಡಿದೆಯೇ? ಅಥವಾ ಮಹಿಳೆಯರ ಬರಹಗಳಿಗೆ ಒತ್ತಾಸೆಯಾಗಿ ನಿಂತಿದೆಯೇ? ಭಾರತದಗ ಸಂದರ್ಭದ ಸ್ತ್ರೀವಾದದ ವೈಶಿಷ್ಟ್ಯವೆಂದರೆ, ಇಲ್ಲಿ ಸ್ತ್ರೀಪರ ಹೋರಾಟ, ಚಳವಳಿ, ಸಾಂವಿಧಾನಿಕ ಪರಿಹಾರ ಮುಂತಾದವು, ಉದಾರವಾದಿ ಮಾನವತಾವಾದಿ ಪುರುಷರಿಂದಲೇ ಆರಂಭಗೊಂಡಿವೆ. ಹಾಗೂ ಇವರೆಲ್ಲರ ಚಿಂತನೆಗಳ ಹಿಂದೆ ವಸಾಹತುಶಾಹಿ ಶಿಕ್ಷಣದ ಪ್ರಭಾವ ದಟ್ಟವಾಗಿದೆ. ಅಕ್ಷರ ಪ್ರಪಂಚಕ್ಕೆ ಮಹಿಳೆಯರನ್ನು ಅನ್ಯಳನ್ನಾಗಿ ಮಾಡಿದ ಪುರುಷ ವರ್ಗದ ಅಂಗವಾದ ಸುಧಾರಣಾವಾದಿ ಗುಂಪಿನಿಂದಲೇ ಆಕೆಗೆ ಅಕ್ಷರಲೋಕದ ಬಾಗಿಲು ತೆರೆದುಕೊಂಡಿತು; ಅಭಿವ್ಯಕ್ತಿಗೆ ಮಾರ್ಗವನ್ನು ತೋರಿಸಿಕೊಟ್ಟು ಪ್ರೋತ್ಸಾಹ ನೀಡಿತು. ಹೀಗೆ ಬರಹವನ್ನು ಆಯ್ಕೆ ಮಾಡಿಕೊಂಡ ಲೇಖಕಿಯರೆಲ್ಲ ಪುರಾಣ, ಇತಿಹಾಸ, ಧಾರ್ಮಿಕ ಮತ್ತು ಸ್ವಾತಂತ್ರ್ಯ ಹೋರಾಟದ ನಾಯಕ-ನಾಯಕಿಯರ ಜೀವನ ಚಿತ್ರದ ಬರವಣಿಗೆಯ ಮೂಲಕ ತಮ್ಮ ಮೊದಲ ಹೆಜ್ಜೆಗಳನ್ನು ಹಾಕಿರುವುದು ಸ್ಪಷ್ಟವಾಗಿದೆ. ಅವರ ಸಾಹಿತ್ಯ ಕೃಷಿಗೆ ಇದು ಪೂರ್ವಭಾವಿ ಸಿದ್ಧತೆಯಾಗಿ ರೂಪುಗೊಂಡಿದೆ.

ಆಂಗ್ಲ ಶಿಕ್ಷಣದ ಅವಕಾಶಗಳು ಹೆಚ್ಚಿದಂತೆ, ಮನೆಯ ಹೊರಗಿನ ದುಡಿಮೆಗೆ ನಿಧಾನವಾಗಿ ಬಾಗಿಲು ಮುಕ್ತವಾದುದರ ಪರಿಣಾಮವಾಗಿ 50, 60ರ ದಶಕಗಳಿಂದ ವಿವಿಧ ವಿಷಯಗಳ ಪಠ್ಯಪುಸ್ತಕ ಕೃತಿ ರಚನೆಗಳಲ್ಲಿ ಮಹಿಳೆಯರು ತೊಡಗಿಸಿಕೊಳ್ಳಲು ಸಾಧ್ಯವಾಯಿತು. 70ರ ದಶಕದ ಉತ್ತರಾರ್ಧದಿಂದ ವಿಮರ್ಶೆ ಮತ್ತು ಸಂಶೋಧನೆಯ ಕ್ಷೇತ್ರದಲ್ಲಿ ಮಹಿಳೆ ತೊಡಗಿಸಿಕೊಳ್ಳಲು ಸಾಧ್ಯವಾಗಿದೆ. ಎಂದರೆ ಇಂತಹ ಕಡೆಗಳಲ್ಲೆಲ್ಲ ವೈಯಕ್ತಿಕ ಪ್ರಯತ್ನಗಳ ಜೊತೆ ಜೊತೆಗೆ, ಶೈಕ್ಷಣಿಕ ವಲಯದ ಅನಿವಾರ್ಯ ಒತ್ತಡಗಳು, ಮತ್ತು ಸಂಘ ಸಂಸ್ಥೆಗಳ ಒತ್ತಾಸೆಗಳು ಮಹಿಳಾ ಬರಹಗಳ ಭಿತ್ತಿಯನ್ನು ವಿಸ್ತರಿಸುವಲ್ಲಿ ಕೈಗೂಡಿಸಿವೆ ಎಂಬುದನ್ನು ಮರೆಯುವಂತಿಲ್ಲ.

ಮಹಿಳೆ ಸಮಾಜದಲ್ಲಿ ನಿರ್ವಹಿಸುವ ಪಾತ್ರಗಳಲ್ಲಾದ ಬದಲಾವಣೆಗಳು ಅವಳ ಬರಹಗಳ ದಿಕ್ಕಿನ ಬದಲಾವಣೆಗೂ ಅನುವು ಮಾಡಿವೆ. ಶಾಸ್ತ್ರಸಂಬಂಧಿ ಬರಹಗಳು, ವೈದ್ಯಕೀಯ, ಕಾನೂನು, ಸಮಾಜ ವಿಜ್ಞಾನ ಮತ್ತು ವಿಜ್ಞಾನದ ಶಿಸ್ತುಗಳಿಗೆ ಸಂಬಂಧಿಸಿದ ಬರಹಗಳು ಮಹಿಳೆಯರಿಂದ ರಚಿತವಾಗಲು, ಅವರು ಆಯಾ ಕ್ಷೇತ್ರಗಳಲ್ಲಿ ವೃತ್ತಿಪರತೆಯ ನೆಲೆಯಿಂದ ಪ್ರವೇಶ ಪಡೆದುದೇ ಕಾರಣವಾಗಿದೆ. ಎಂದರೆ ವ್ಯವಸ್ಥೆಯು

ಕೊಡ ಮಾಡಿದ ಅವಕಾಶಗಳ ಇತಿಮಿತಿಗಳು ಅಥವಾ ಸಾಧ್ಯತೆಗಳು ಮಹಿಳಾ ಬರೆವಣಿಗೆಯನ್ನು ಸದಾ ನಿಯಂತ್ರಿಸುತ್ತಾ ಬಂದಿವೆ.

ಈ ಶತಮಾನದ ಎಂಬತ್ತರ ದಶಕದಿಂದ ಕನ್ನಡ ಸಂಸ್ಕೃತಿಯಲ್ಲಿ ಸ್ತ್ರೀವಾದಿ ಚಿಂತನೆಯ ಅಲೆ ಆರಂಭವಾಯಿತು. ಆರಂಭದಲ್ಲಿ ಸಾಹಿತ್ಯದ ವಲಯವನ್ನು ತೆಕ್ಕೆಗೆ ತೆಗೆದುಕೊಂಡು, ಕ್ರಮೇಣ ಜನರ ಬದುಕಿನ ಎಲ್ಲ ರಂಗಗಳಲ್ಲೂ ಎಲ್ಲ ನೆಲೆಗಳಲ್ಲೂ ಸ್ತ್ರೀವಾದಿ ವಿಮರ್ಶೆ ಮತ್ತು ವಿಶ್ಲೇಷಣೆಗಳು ವ್ಯಾಪಿಸಿದವು. ಇವುಗಳಿಂದಾಗಿ ಮಹಿಳೆಯರ ಅಭಿವ್ಯಕ್ತಿಯ ಮೇಲೆ ವ್ಯವಸ್ಥೆಯ ಬಿಗಿಮುಷ್ಟಿಯ ಬಲವನ್ನು ವಿಶ್ಲೇಷಿಸಲು ಮತ್ತು ವ್ಯಾಖ್ಯಾನಿಸಲು ಸಾಧ್ಯವಾಯಿತು. ವಿಶೇಷವೆಂದರೆ ಕನ್ನಡ ವಿಮರ್ಶಾ ಮೀಮಾಂಸೆಗಳಲ್ಲಿ ಯಾವುದರ ಕಡೆಗೂ (ಗಾಂಧಿವಾದ, ಮಾರ್ಕ್ಸ್ ವಾದ, ಲೋಹಿಯಾವಾದ, ಅಂಬೇಡ್ಕರ್‌ವಾದ) ವಿಶೇಷ ಆಸಕ್ತಿ ತೋರದ ಮಹಿಳಾ ವರ್ಗ ಸ್ತ್ರೀವಾದಿ ವಿಮಶಾ ಪಂಥಕ್ಕೆ ಆಸಕ್ತವಾದುದು ಮಾತ್ರವಲ್ಲ; ಅದರ ದಿಕ್ಕುಗಳನ್ನು ವಿಸ್ತರಿಸುವುದರಲ್ಲಿ ಮಹತ್ವದ ಕೊಡುಗೆಯನ್ನು ನೀಡಿದೆ. ಇದರ ವಿಪರ್ಯಾಸವೆಂಬಂತೆ ಸ್ತ್ರೀವಾದಿ ವಿಮರ್ಶೆಯ ಬಗ್ಗೆ ನಿರ್ಲಿಪ್ತತೆ ಮತ್ತು ದಿವ್ಯ ನಿರ್ಲಕ್ಷ್ಯವನ್ನು ಆರಂಭದಲ್ಲಿ ತೋರಿದ ಪುರುಷ ವರ್ಗದ (ಬಿ.ಎ. ವಿವೇಕ ರೈ ಮತ್ತು ಡಿ.ಆರ್.ಎನ್.) ಸುಧಾರಕರ ಚಿಂತನೆಗಳು ಮತ್ತು ಹೋರಾಟಗಳು ಮಹಿಳಾ ಸಾಹಿತ್ಯಕ್ಕೆ ಪ್ರೇರಣೆಯನ್ನು ನೀಡಿವೆ. ಇದರಿಂದಾಗಿ ವೈದಿಕ ಸಮಾಜದ ನಂಬಿಕೆಗಳು, ಆಚರಣೆಗಳು, ಮಹಿಳೆಯರ ಸಂದರ್ಭದಲ್ಲಿ ಊರ್ಜಿತವಾಗಿದ್ದ ಅನಿಷ್ಟ ಹಾಗೂ ಕ್ರೂರ ಸಾಮಾಜಿಕ ಪದ್ಧತಿಗಳ ವಿರುದ್ಧ ಚರ್ಚೆ, ಹೋರಾಟ ನಡೆಯಲು ಸಾಧ್ಯವಾಗಿದೆ. ಸಾಹಿತ್ಯಿಕ ವಲಯದಲ್ಲೂ ಈ ಚರ್ಚೆ ಸ್ಥಾಪಿತ ಮತ್ತು ಸ್ತ್ರೀಪರ ನೆಲೆ ಎರಡರಿಂದಲೂ ಸಾಧ್ಯವಾಗಿದೆ. ಇವೆಲ್ಲವುಗಳ ಪರಿಣಾಮವಾಗಿ ವರ್ತಮಾನದಲ್ಲಿ ಮಹಿಳೆಯ ಸ್ಥಾನಮಾನಗಳು ಬದಲಾಗಿವೆ ಮತ್ತು ಮುಕ್ತ ಸಂವಾದವೊಂದು ಏರ್ಪಡುವ ವಾತಾವರಣ ಸಾಮಾಜಿಕ ವ್ಯವಸ್ಥೆಯಲ್ಲಿ ನಿರ್ಮಾಣಗೊಂಡಿದೆ. ಆದರೆ ಇದೇ ಸ್ಥಿತಿಯನ್ನು ಬೇರೆ ವ್ಯವಸ್ಥೆಯೊಳಗೆ ಕಾಣಲು ಸಾಧ್ಯವಾಗಿಲ್ಲ.

**ಧಾರ್ಮಿಕ ವ್ಯವಸ್ಥೆ:** ಸಮಾಜವೆಂಬ ಬೃಹತ್ ಸಂಸ್ಥೆಯ ಮುಂದುವರಿಕೆಯಲ್ಲಿ ಧಾರ್ಮಿಕ ವ್ಯವಸ್ಥೆಯ ಪಾತ್ರ ಎಲ್ಲ ಕಾಲಕ್ಕೂ ಪ್ರಧಾನವಾಗಿದೆ. ಜಾತ್ಯಾತೀತವೆಂದು ಗುರುತಿಸಿಕೊಂಡಿರುವ ಭಾರತದ ಸಮಕಾಲೀನ ಸಂದರ್ಭದಲ್ಲೂ ಧರ್ಮ ಮತ್ತು ಧಾರ್ಮಿಕ ವಲಯದ ಪುರೋಹಿತಶಾಹಿ ವರ್ಗ ತನ್ನ ಬಿಗಿ ಹಿಡಿತವನ್ನು ಮುಂದುವರಿಸಿಕೊಂಡು ಬರಲು ನಿರಂತರ ಹೋರಾಡುತ್ತಿರುವುದು ಕಂಡು ಬರುತ್ತಿದೆ. ಇಂದಿಗೂ ನಮ್ಮಲ್ಲಿ ಎರಡು ಬಗೆಯ ಚಿಂತನೆಯ ವಲಯಗಳಿವೆ. ಮೊದಲನೆಯದು ಧಾರ್ಮಿಕ ಮೂಲಭೂತವಾದಿ ಗುಂಪಾದರೆ, ಎರಡನೆಯದು (ನಾಗರಾಜ್ ಅವರ ಆರಂಭದ ಸ್ತ್ರೀವಾದಿ ಲೇಖನಗಳನ್ನು ಹೊರತು ಪಡಿಸಿದಂತೆ), ಸ್ತ್ರೀವಾದವನ್ನು ನಿರ್ಲಕ್ಷಿಸುವುದು ಸಾಧ್ಯವೇ ಇಲ್ಲ ಎಂದಾದಾಗ ಮಾನ್ಯತೆ ನೀಡಿದೆ; ಆದರೆ ಆ ವರ್ಗದಿಂದ ಸ್ತ್ರೀವಾದಿ ಮೀಮಾಂಸೆಗೆ ಸಂಬಂಧಿಸಿದಂತೆ ಬರೆವಣಿಗೆ ಆದುದು ಅತ್ಯಲ್ಪ. ಇನ್ನೊಂದೆಡೆ .ಸ್ತ್ರೀವಾದದ ಸೈದ್ಧಾಂತಿಕ ಚರ್ಚೆಗಳು ಹರಳುಗಟ್ಟಲು ಮತ್ತು ಹಲವು ಹೊಸ ದನಿಗಳು ಕೇಳಿಬರಲು ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಕರ್ನಾಟಕ ಸಾಹಿತ್ಯ ಅಕಾಡೆಮಿ, ವಿವಿಧ ವಿಶ್ವವಿದ್ಯಾನಿಲಯಗಳು ಮುಂತಾದ ಸರಕಾರಿ ಹಾಗೂ ಅರೆ ಸರಕಾರಿ ಸಂಸ್ಥೆಗಳು, ಕೆಲವು ಪ್ರಕಾಶನ ಸಂಸ್ಥೆಗಳು, ಒತ್ತಾಸೆಯಾಗಿ ನಿಂತವು. ಕರ್ನಾಟಕ ಲೇಖಕಿಯರ ಸಂಘ, ಜಾಗೃತಿ, ಮಾನಸ, ಸಮತಾ ಅಧ್ಯಯನ ಕೇಂದ್ರಗಳ ಕೆಲಸಗಳು, ವಿವಿಧ ಮಹಿಳಾ ಸಂಘ ಸಂಸ್ಥೆಗಳ ಮತ್ತು ಸರ್ಕಾರೇತರ ಸಂಸ್ಥೆಗಳ ಕಾರ್ಯಗಳು ವ್ಯವಸ್ಥೆಯೊಳಗಿನ ಮಹಿಳೆಯ ಇಕ್ಕಟ್ಟುಗಳನ್ನು ಅನಾವರಣ ಮಾಡಲು ಶ್ರಮಿಸಿವೆ. ಈ ಹಿನ್ನೆಲೆಯಿಂದಲೇ ಸಮಕಾಲೀನ ಸಂದರ್ಭದಲ್ಲಿ ವ್ಯವಸ್ಥೆ ಮತ್ತು ಮಹಿಳಾ ಬರಹಗಳು ಎಂಬ ಚರ್ಚೆಯನ್ನು ಆರಂಭಿಸುವುದು ಸೂಕ್ತ.

**ಸಾಮಾಜಿಕ ವ್ಯವಸ್ಥೆ:** ಮಹಿಳೆಯರ ಬರಹಗಳು ಸಾಮಾಜಿಕ ವ್ಯವಸ್ಥೆಯ ಜೊತೆ ಒಂದು ಶತಮಾನದಿಂದ ಅನುಸಂಧಾನವನ್ನು ನಡೆಸಿಕೊಂಡು ಬಂದಿವೆ. ಇದಕ್ಕೆ ಆ ದಿಕ್ಕಿನಲ್ಲಿ ಕೆಲಸ ಮಾಡಿದ ಉದಾರವಾದಿ ಸಮಾಜ ಧರ್ಮದ ಚೌಕಟ್ಟಿನ ಒಳಗೇ ಅಲ್ಪ ಪ್ರಮಾಣದ ಸುಧಾರಣೆಗಳನ್ನು ಪ್ರತಿಪಾದಿಸುವ ಗುಂಪು. (ಧಾರ್ಮಿಕ ವ್ಯವಸ್ಥೆಯಿಂದ ಹೊರ ಜಿಗಿದು ಬದುಕಬಲ್ಲೆವು ಎಂಬವರ ಸಂಖ್ಯೆ ಇಂದಿಗೂ ಅತ್ಯಲ್ಪ ಪ್ರಮಾಣದಲ್ಲಿದೆ). ಈ ಎರಡು ಗುಂಪುಗಳಲ್ಲಿ ತನ್ನ ಹಿತವರು ಎಂದು ಎರಡನೆಯ ಗುಂಪನ್ನು ಒಪ್ಪಿಕೊಂಡ ಮಹಿಳಾ ವರ್ಗವು ಆ ದಿಕ್ಕಿನಲ್ಲಿ ಬರುವ ಅಲ್ಪಸ್ವಲ್ಪ ಸ್ವಚ್ಛ ಗಾಳಿಯನ್ನೇ ಧನ್ಯತೆಯಿಂದ ಸ್ವೀಕರಿಸಬೇಕಾಗಿದೆ. ನಿದರ್ಶನಕ್ಕೆ ಮುಸ್ಲಿಂ ಸಮುದಾಯದಿಂದ ಕೆಲವು ಲೇಖಕಿಯರು ಸಾಹಿತ್ಯ ಕೃಷಿಯಲ್ಲಿ ತೊಡಗಿದ್ದರೂ, ಧಾರ್ಮಿಕ ಆಚರಣೆಗಳ ನೆಲೆಯಿಂದ ಮಹಿಳೆಗೆ ಆಗುತ್ತಿರುವ ಅನ್ಯಾಯಗಳ ಬಗ್ಗೆ ಮಾತಾಡುವ ಹಾಗೂ ಬರೆಯುವ ಮಹಿಳೆಯರು ಎಷ್ಟು ಮಂದಿ ಎಂದಾಗ ಸಾರಾ ಅಬೂಬಕರ್ ಅವರನ್ನ ಬಿಟ್ಟರೆ ನಮಗೆ ಇನ್ನೊಂದು ಹೆಸರು ಸಿಗುವುದಿಲ್ಲ (ಲೇಖನ ಗುಚ್ಛ). ಸಾರಾ ಅವರು ಪ್ರತಿಪಾದಿಸ ಬಯಸುವ ಸುಧಾರಣೆಗಳಲ್ಲಿ ಹಲವು ಆ

ಸಮುದಾಯದ ಪುರುಷ ವರ್ಗದಿಂದ ಮಾನ್ಯತೆ ಪಡೆಯುವುದಿಲ್ಲ; ತಾತ್ವಿಕವಾಗಿ ಕೆಲವೊಮ್ಮೆ ಒಪ್ಪಿಕೊಂಡರೂ ಅನ್ವಯಿಕತೆಯಲ್ಲಿ ಅಸಹಾಯಕತೆಯನ್ನೊ, ಸಮಯ ಸಾಧಕತೆಯನ್ನೋ ಅದು ಮೆರೆಯುವುದೇ ಅಧಿಕ. ಕ್ರೈಸ್ತ ಸಮುದಾಯದ ಮಹಿಳಾ ವರ್ಗವು ಹೆಚ್ಚು ವ್ಯಕ್ತಿ ಸ್ವಾತಂತ್ರ್ಯವನ್ನು ಅನುಭವಿಸುತ್ತದೆ ಎಂಬುದು ಹೊರಗಿನವರ ಗ್ರಹಿಕೆಯಾಗಿದೆ. ಆದರೆ ಕ್ರೈಸ್ತ ಧಾರ್ಮಿಕ ಸಮುದಾಯದೊಂದಿಗೆ ಅಲ್ಲಿಯ ಮಹಿಳೆಯರು ನಡೆಸಿರುವ ಅನುಸಂಧಾನದ ಎಳೆಗಳು ನಮಗೆ ದೊರೆಯುವುದಿಲ್ಲ. ಇದು ಹಿಂದೂ ಎಂದು ಕರೆಯಲಾಗುವ ಬೃಹತ್ ಗುಂಪಿಗೂ ಅನ್ವಯ ವಾಗುವ ಮಾತೇ ಆಗಿದೆ. ಎಲ್ಲ ಧರ್ಮಗಳಲ್ಲೂ ಮಹಿಳೆ ದ್ವಿತೀಯ ದರ್ಜೆಯ ಪ್ರಜೆಯಾಗಿಯೇ ಸ್ವೀಕೃತವಾಗಿರುವ ಪರಿಣಾಮವಾಗಿ ಅನುಸಂಧಾನದ ಸಾಧ್ಯತೆಗೆ ಅಡ್ಡಿಯಾಗಿದೆ.

ಇತ್ತೀಚೆಗೆ ಮಂಗಳೂರಿನಲ್ಲಿ ಜರುಗಿದ, ಮತಧರ್ಮ ಗಳನ್ನು ಸ್ತ್ರೀವಾದಿ ನೆಲೆಯಿಂದ ವಿಶ್ಲೇಷಿಸುವ ಉದ್ದೇಶದಿಂದ ರೂಪಿತವಾಗಿದ್ದ ವಿಚಾರಗೋಷ್ಠಿಯಲ್ಲಿ ಪಾಲ್ಗೊಂಡಿದ್ದೆ. ವೇದಿಕೆಯಲ್ಲಿ ಮಾತನಾಡಿದ ಎಲ್ಲ ಮಹಿಳೆಯರೂ ತಾವು ಪ್ರತಿನಿಧಿಸುತ್ತಿದ್ದ ಧರ್ಮದಲ್ಲಿ ಸ್ತ್ರೀಪರ ನಿಲುವುಗಳು ಎಷ್ಟಿವೆ ಎಂಬ ಪಟ್ಟಿಯನ್ನು ಮಾಡುವುದರಲ್ಲೇ ಅತ್ಯಂತ ಆಸಕ್ತ ರಾಗಿದ್ದುದು ವ್ಯಕ್ತವಾಯಿತು. ಮಾತನಾಡಿದ ಪುರುಷ ಭಾಷಣಕಾರರು ಒಬ್ಬರು ಮಾತ್ರ ತಾವು ಪ್ರತಿನಿಧಿಸುವ ಧರ್ಮದಲ್ಲಿ ಅಡಕವಾಗಿರುವ ಸ್ತ್ರೀವಿರೋಧಿ ಸಂಹಿತೆಗಳತ್ತ ಬೆಳಕು ಚೆಲ್ಲುವ ಪ್ರಯತ್ನ ಮಾಡಿದ್ದರು. ಎಂದರೆ ಎಂದಿಗೂ ಧರ್ಮದ ಯಾಜಮಾನ್ಯದಿಂದ ಬೌದ್ಧಿಕ ಮತ್ತು ಮಾನಸಿಕ ನೆಲೆಯ ಬಿಡುಗಡೆ ಮಹಿಳೆಗೆ ಸಾಧ್ಯವಾಗಿಲ್ಲ ಎಂಬುದನ್ನು ತಿಳಿಸುವುದಕ್ಕಾಗಿ ಮೇಲಿನ ಸಂದರ್ಭವನ್ನು ಉಲ್ಲೇಖಿಸಿದ್ದೇನೆ.

ಧಾರ್ಮಿಕ ಗ್ರಂಥಗಳನ್ನು ಆಮೂಲಾಗ್ರವಾಗಿ ಓದಿರುವ ಮಹಿಳೆಯರೇ ವಿರಳ. ಹೀಗಾಗಿ ಸಮಕಾಲೀನ ಪುರೋಹಿತ ಶಾಹಿ ವರ್ಗವು ಅವುಗಳ ಕುರಿತು ನಡೆಸುತ್ತಿರುವ ವ್ಯಾಖ್ಯಾನಗಳ ತಲ ಸ್ಪರ್ಶಿ ವಿಮರ್ಶೆ ಮಾಡುವುದು ಮಹಿಳೆಯರಿಗೆ ಅಸಾಧ್ಯವಾಗಿದೆ. (ನಿರುಪಮಾ ಅವರ 'ಧರ್ಮಶಾಸ್ತ್ರಗಳು ಸ್ತ್ರೀ ಹಾಗೂ ಶೋಷಣೆ' (1996)ಯ ಹೊರತಾಗಿ). ಇದರಿಂದಾಗಿ ಧಾರ್ಮಿಕ ವ್ಯವಸ್ಥೆಯು ಮಹಿಳಾ ವರ್ಗದ ಮೇಲೆ ಯಾಜಮಾನ್ಯವನ್ನು ಸುಲಭವಾಗಿ ದಕ್ಕಿಸಿಕೊಂಡು ಬಿಟ್ಟಿರುತ್ತದೆ. ಸ್ತ್ರೀವಾದಿ ನೆಲೆಯಿಂದ ಎಲ್ಲ ಧಾರ್ಮಿಕ ಗ್ರಂಥಗಳ ಪುನರ್ ಪರಿಶೀಲನೆ, ಮರುಮೌಲ್ಯಮಾಪನ ಇಂದು ಅಗತ್ಯವಾಗಿದೆ.

**ರಾಜಕೀಯ ವ್ಯವಸ್ಥೆ:** ಗ್ರಾಮ ಪಂಚಾಯತು ಮತ್ತು ಜಿಲ್ಲಾ ಪಂಚಾಯತುಗಳಲ್ಲಿ 33%ಗಿಂತ ಹೆಚ್ಚಿನ ಸಂಖ್ಯೆಯಲ್ಲಿ ಇಂದು ಮಹಿಳೆಯರು ರಾಜಕೀಯ ಪ್ರಕ್ರಿಯೆಯಲ್ಲಿ ಪಾಲ್ಗೊಳ್ಳುತ್ತಿದ್ದಾರೆ. ಆರಂಭದ ತೊಡಕುಗಳನ್ನು ನಿವಾರಿಸಿಕೊಳ್ಳುತ್ತ ತಮ್ಮ ಕ್ಷೇತ್ರಗಳಲ್ಲಿ ಸ್ತ್ರೀಪರ ನೆಲೆಯ ಆದ್ಯತಾ ಕಾರ್ಯಕ್ರಮಗಳು ಅನುಷ್ಠಾನಗೊಳ್ಳುವಂತೆ ಮಹಿಳಾ ಚುನಾಯಿತ ಪ್ರತಿನಿಧಿಗಳು ಕ್ರಮ ಕೈಗೊಳ್ಳುತ್ತಿರುವ ವರದಿಗಳು ಬರುತ್ತಿವೆ. ಆದರೆ ಲೋಕಸಭೆ, ರಾಜ್ಯಸಭೆಗಳಲ್ಲಿ ಮಹಿಳಾ ಮೀಸಲಾತಿ ಮಸೂದೆ ಮಂಡನೆಯ ಪ್ರಹಸನ ಇನ್ನೂ ಮುಗಿದಿಲ್ಲ. ಸ್ವತಂತ್ರ, ಸಾರ್ವಭೌಮ, ಗಣರಾಜ್ಯವೆಂದೆಲ್ಲ ಗುರುತಿಸಿಕೊಂಡಿರುವ ಭಾರತದ ಚುನಾಯಿತ ಪುರುಷ ಪ್ರತಿನಿಧಿಗಳು ಮಹಿಳಾ ಮೀಸಲಾತಿ ಮಸೂದೆಯನ್ನು ಸಂಸತ್ತಿನಲ್ಲಿಯೇ ಹರಿದು ಹಾಕುವ, ಮಸೂದೆಯು ಚರ್ಚೆಗೆ ಬಾರದಂತೆ ಗದ್ದಲವೆಬ್ಬಿಸುವ ಮೂಲಕ ತಮ್ಮ ಯಾಜಮಾನ್ಯವನ್ನು ಸಾಬೀತು ಪಡಿಸುತ್ತಿದ್ದಾರೆ. ಇಂದಿನ ರಾಜಕೀಯ ವ್ಯವಸ್ಥೆಯಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳುವ ಸಂದರ್ಭಗಳಲ್ಲಿ ಮಹಿಳೆಗೆ ಎದುರಾಗುವ ಇಕ್ಕಟ್ಟುಗಳೂ ಹಲವು. ಅವಿವಾಹಿತೆಯರು, ವಿಧವಾ ಪತ್ನಿಯರು ಇಲ್ಲವೆ ಕುಟುಂಬ ಸಂಸ್ಥೆಯಿಂದ ದೂರ ಉಳಿದವರೇ ರಾಷ್ಟ್ರ ಮತ್ತು ರಾಜ್ಯಮಟ್ಟದ ಅಧಿಕಾರದ ಹುದ್ದೆಗಳನ್ನು ಪಡೆಯಲು ಸಾಧ್ಯವೆಂಬ ವಾತಾವರಣ ನಿರ್ಮಾಣವಾಗಿದೆ. ಉಳಿದವರೆಲ್ಲ ಆಯಾ ಪಕ್ಷದ ಮುಖವಾಣಿಗಾಗಿ ಇಲ್ಲವೆ ಆಲಂಕಾರಿಕ ಹುದ್ದೆಗಳಲ್ಲಿ ಸಂತೃಪ್ತಿ ಪಡಬೇಕಾದ ಸ್ಥಿತಿಯಿದೆ. ಹೀಗಾಗಿ ಇಂದಿಗೂ ರಾಜಕೀಯ ವ್ಯವಸ್ಥೆಯ ಕುರಿತು ವಿಮರ್ಶಾತ್ಮಕ ನಿಲುವು ಕೈಗೊಳ್ಳಲು ಸಾಧ್ಯವಾಗಿಲ್ಲ.

ಇಂತಹ ಸಂದರ್ಭದಲ್ಲಿ ಮಹಿಳಾ ಬರಹಗಳು ಪ್ರಸ್ತುತ ವ್ಯವಸ್ಥೆಯ ಕುರಿತಂತೆ ಹಮ್ಮಿಕೊಳ್ಳಬೇಕಾದ ಕಾರ್ಯ ತಂತ್ರಗಳು ಏನಾಗಿರಬೇಕು? ಸಂವಿಧಾನದ ನೀತಿ ನಿರೂಪಣೆಯ ಹಂತದಲ್ಲಿ ಪಾಲ್ಗೊಳ್ಳುವಿಕೆಯ ಅವಕಾಶದಿಂದ ವಂಚಿತವಾದ ಸ್ತ್ರೀ ಸಮುದಾಯವು, ಮಹಿಳೆಯರ ಆರೋಗ್ಯದ ಮೇಲೆ ಚೆಲ್ಲಾಟವಾಡುವ ಔಷಧಿ ಕಂಪೆನಿಗಳ ವಿರುದ್ಧ ಮಹಿಳಾ ದೌರ್ಜನ್ಯದ ಪ್ರಕರಣಗಳು, ಅವುಗಳ ವಿಚಾರಣೆ ಹಾಗೂ ನ್ಯಾಯವಿಧಾನ ಕ್ರಮಗಳ ಸುಧಾರಣೆ ಕುರಿತು, ಆರ್ಥಿಕ ನೀತಿಗಳ ಕುರಿತು ಹೀಗೆ ಪ್ರತಿಯೊಂದರ ಕುರಿತೂ ಹೋರಾಟ ಮಾಡಬೇಕಾಗಿದೆ. ಇಂತಹ ಸಂದರ್ಭಗಳಲ್ಲೆಲ್ಲ ಮಹಿಳಾ ಸಮುದಾಯದ ಶ್ರಮ, ಸಮಯ ಹಾಗೂ ಶಕ್ತಿಗಳು ಅಗತ್ಯಕ್ಕಿಂತ ಹಲವು ಪಟ್ಟು ಹೆಚ್ಚು ವ್ಯಯವಾಗುವ ಸ್ಥಿತಿಯಿದೆ. ಈ ದಿಕ್ಕಿನಲ್ಲಿ ಮಹಿಳೆಯರ ಅನುಸಂಧಾನ ತಕ್ಕಮಟ್ಟಿಗಾದರೂ ಆರಂಭವಾಗಿದೆ. ಎನ್.ಗಾಯತ್ರಿ ಅವರ 'ಮಹಿಳಾ ಚಳವಳಿಯ ಮಜಲುಗಳು' (1998), ಶಮಂತ ಅವರ 'ಕಟಕಟೆಯೊಳಗೆ ಕುಟುಂಬದ ಕಣ್ಣೀರು (1999), 'ಕದನ ಕಾಶ್ಮೀರ' (1995), 'ಹಿಮದಗ್ನಿ' (1996), ಗೀತಾ

ಕೃಷ್ಣಮೂರ್ತಿಯವರ 'ಮಹಿಳೆ ಕಾನೂನು ಮತ್ತು ರಾಜಕಾರಣ' (2001), ನೀಲಾ ಕೆ. ಅವರ 'ಬದುಕು ಬಂಧಿಖಾನೆ' (2001), ಆರ್. ಪೂರ್ಣಿಮಾ ಅವರ 'ರಾಜಕೀಯ ಮಹಿಳೆ- ಮೀಸಲಾತಿಯ ಅಗತ್ಯ' (1997), ನೇಮಿಚಂದ್ರ ಮತ್ತು ಹೇಮಲತಾ ಮಹಿಷಿಯವರ 'ನ್ಯಾಯಕ್ಕಾಗಿ ಕಾದಿರುವ ಬಾಂವ್ರಿದೇವಿ', ಸಂವೇದಿ ಪ್ರಕಾಶನದ 'ಕೆಲಸದ ಸ್ಥಳದಲ್ಲಿ ಲೈಂಗಿಕ ಕಿರುಕುಳ' (2001), ಜನವಾದಿ ಮಹಿಳಾ ಸಂಘಟನೆಯ ಪ್ರಕಟಣೆಯಾದ 'ಕ್ವಿನಾಕ್ರಿನ್-ಗರ್ಭನಿರೋಧಕ ಗುಳಿಗೆ' ಮುಂತಾದ ಕೃತಿಗಳೂ, ಮಾನಸ, ಅಚಲ, ಜಾಗೃತಿ, ಮಹಿಳಾ ಅಧ್ಯಯನ ಪತ್ರಿಕೆಗಳ ಬರಹಗಳು ರಾಜಕೀಯ ವ್ಯವಸ್ಥೆಯೊಳಗಿನ ಮಹಿಳಾ ನೆಲೆಗಳನ್ನು ಸೂಚಿಸುತ್ತವೆ.

**ಆರ್ಥಿಕ ವ್ಯವಸ್ಥೆ:** ಆರ್ಥಿಕ ಸ್ವಾತಂತ್ರ್ಯವೇ ನಿಜವಾದ ಸ್ವಾತಂತ್ರ್ಯ ಎಂಬ ಮಾತಿದೆ. ವ್ಯಕ್ತಿ ಆರ್ಥಿಕ ಉತ್ಪಾದನೆಯಲ್ಲಿ ತೊಡಗಿದರೆ ಸಾಲದು, ತನ್ನ ದುಡಿಮೆಯ ಗಳಿಕೆಯ ನಿರ್ವಹಣೆಯಲ್ಲೂ ಸಕ್ರಿಯವಾದ ಪಾತ್ರವನ್ನು ವಹಿಸಬೇಕು. ಆಗ ಮಾತ್ರ ಸ್ವಾತಂತ್ರ್ಯಕ್ಕೆ ಅರ್ಥ ದೊರೆಯುತ್ತದೆ. ಮಹಿಳೆಯ ಖಾಸಗಿ ದುಡಿಮೆಯನ್ನು ದೇಶದ ಆದಾಯದ ಭಾಗವಾಗಿ ಗಣಿಸದೇ ಇರುವ ಸರಕಾರ, ಆಕೆಯ ದುಡಿಮೆಯನ್ನೇ ಅಮಾನ್ಯಗೊಳಿಸಿರುವ ಸಾಮಾಜಿಕ ವ್ಯವಸ್ಥೆಗಳಲ್ಲಿ ಆಕೆ ಯಾವ ಜಾತಿ ಮತ್ತು ವರ್ಗಕ್ಕೇ ಸೇರಿರಲಿ, ಮೂಲಭೂತವಾಗಿ ಅವಳ ಸ್ಥಿತಿ ಒಂದೇ ರೀತಿಯದಾಗಿರುತ್ತದೆ. ಬಹುತೇಕ ಕುಟುಂಬಗಳಲ್ಲಿ ಮಹಿಳೆ ಕುಟುಂಬದ ಆದಾಯದ ಆರ್ಥಿಕ ನಿರ್ವಹಣೆಯ ನಿರ್ಧಾರಗಳನ್ನು ಕೈಗೊಳ್ಳುವ ಸ್ಥಾನದಲ್ಲಿ ಇರುವುದಿಲ್ಲ. ಒಂದು ರಾಜ್ಯದ ಮತ್ತು ದೇಶದ ಬಜೆಟ್ ಕೂಡಾ ಈ ನೆಲೆಯಲ್ಲೇ ನಿಂತಿರುತ್ತದೆ. ಬಜೆಟ್ ಬಗೆಗಿನ ವಿಶ್ಲೇಷಣೆಗೆ ಆಹ್ವಾನಿತರಾಗುವವರು ಪುರುಷರೇ ಆಗಿರುತ್ತಾರೆ. ಸೀಮೆಎಣ್ಣೆ ಗ್ಯಾಸು, ಗೃಹೋಪಯೋಗಿ ವಸ್ತುಗಳ ಬೆಲೆ ಏರಿಕೆ ಕುರಿತ ಪ್ರತಿಕ್ರಿಯೆಗಳು ಮಾತ್ರ ಖಾಯಂ ಆಗಿ ಮಹಿಳೆಯರಿಗೆ ಮೀಸಲಾಗಿರುತ್ತವೆ.

ಪಿತೃಪ್ರಧಾನ ಸಾಮಾಜಿಕ ವ್ಯವಸ್ಥೆಯಲ್ಲಿ ಇಂತಹ ಆರ್ಥಿಕ ನೀತಿಗಳು ಮಹಿಳೆಯ ಚಲನವಲನಗಳನ್ನು ಗರಿಷ್ಠ ಪ್ರಮಾಣದಲ್ಲಿ ನಿಯಂತ್ರಿಸಿ ಬಿಡುತ್ತದೆ. ಇದು ತರುವ ಪರಾವಲಂಬಿತನವು ಅವಳ ಅಭಿವ್ಯಕ್ತಿಯನ್ನೂ, ಬರಹಗಳನ್ನೂ ನಿಯಂತ್ರಿಸಿದೆ. ನಮ್ಮಲ್ಲಿ ಅರ್ಥಶಾಸ್ತ್ರವನ್ನು ಪದವಿ ಮತ್ತು ಸ್ನಾತಕೋತ್ತರ ಪದವಿ ಮಟ್ಟಗಳಲ್ಲಿ ಬೋಧಿಸುವ ಅರ್ಹ ಅಧ್ಯಾಪಕಿಯರಿದ್ದಾರೆ. ಆದರೆ ಆರ್ಥಿಕ ವಿಶ್ಲೇಷಕ ಮಹಿಳೆಯರಿಲ್ಲ (ಸುಚೇತಾ ದಲಾಲ್ ಅವರ ಅಂಕಣ ಬರಹ 'ಅರ್ಥಾವಲೋಕನ' - ವಿಜಯ ಕರ್ನಾಟಕವನ್ನು ಹೊರತು ಪಡಿಸಿದಂತೆ.) ಆರ್ಥಿಕ ವ್ಯವಹಾರಗಳ ಸಲಹೆಗಾರರೂ ಉನ್ನತ ಮಟ್ಟದಲ್ಲಿ ಇಲ್ಲವೆಂಬಷ್ಟು ವಿರಳ. ಇವೆಲ್ಲ ಅಘೋಷಿತ ನೆಲೆಯಲ್ಲಿ ಮಹಿಳೆಯರ ಚಿಂತನೆ ಮತ್ತು ಬರಹಗಳ ಮೇಲೆ ಪ್ರಭಾವ ಬೀರಿವೆ. ಶಮಂತ ಅವರ 'ದುಡಿತ ಮಿಡಿತ' (2001), ಮುಂತಾದ ಕೆಲವು ಪ್ರಯತ್ನಗಳನ್ನು ಬಿಟ್ಟರೆ, ಈ ಕ್ಷೇತ್ರದಲ್ಲಿ ಮಹಿಳಾ ಬರವಣಿಗೆ ಸಾಗಬೇಕಾಗಿರುವ ಹಾದಿ ಬಹುದೊಡ್ಡದಿದೆ.

ಇಷ್ಟು ಚರ್ಚೆಯ ಹಿನ್ನೆಲೆಯಲ್ಲಿ ಕೆಲವು ತೀರ್ಮಾನಗಳಿಗೆ ಬರಲು ಸಾಧ್ಯವಾಗುತ್ತದೆ.

ಯಾಜಮಾನ್ಯವನ್ನು ಒಪ್ಪಿಕೊಂಡುದರ ಫಲವಾಗಿ ಹೇಗೆ ಸಾಹಿತ್ಯದ ಅಭಿವ್ಯಕ್ತಿಯಲ್ಲಿ ಮಹಿಳೆ ಸ್ವನಿಯಂತ್ರಣವನ್ನು ಆರೋಪಿಸಿಕೊಂಡು, ಅದೇ ಸಾಮಾಜಿಕ, ಧಾರ್ಮಿಕ, ರಾಜಕೀಯ ಮತ್ತು ಆರ್ಥಿಕ ವ್ಯವಸ್ಥೆಗಳು ಮಹಿಳಾ ಬರವಣಿಗೆಗಳ ಮೇಲೆ ಧನಾತ್ಮಕ ಹಾಗೂ ಋಣಾತ್ಮಕ ನೆಲೆಗಳಿಂದ ಪ್ರಭಾವಿಸಿರುವುದು ಸ್ಪಷ್ಟವಾಗಿದೆ. ಕೆಲವು ಕ್ಷೇತ್ರಗಳಲ್ಲಿ ಆಕೆಯ ಪ್ರವೇಶಕ್ಕೆ ಮತ್ತು ಚಿಂತನೆ, ಬರಹಗಳಿಗೆ ಅವಕಾಶ ನೀಡಿ, ತೋರಿಕೆಯ ಮಾನ್ಯತೆಯನ್ನು ನೀಡಿ, ಹಲವು ಕ್ಷೇತ್ರಗಳಲ್ಲಿ ಅವಳ ಪಾಲ್ಗೊಳ್ಳುವಿಕೆಗೆ, ನಿಯಂತ್ರಣವನ್ನು ಹೇರಿವೆ. ಇದು ಯಾಜಮಾನ್ಯದ ಪ್ರಧಾನ ಗುಣಗಳಲ್ಲಿ ಒಂದಾಗಿದೆ.

**- ಕೃಪೆ: ಲೇಖಕಿ**

*ಎಲ್ಲಾ ರಾಜಕೀಯ ಪಕ್ಷಗಳೂ ಮಹಿಳೆಯರು ರಾಜಕೀಯ ಪ್ರಕ್ರಿಯೆಯಲ್ಲಿ ಹೆಚ್ಚಾಗಿ ಪಾಲ್ಗೊಳ್ಳುವುದನ್ನು ತಾವು ಬೆಂಬಲಿಸುವುದಾಗಿ ಹೇಳಿಕೊಳ್ಳುತ್ತವೆ. ಆದರೆ, ಚುನಾವಣೆಗಳಲ್ಲಿ ಈ ಪಕ್ಷಗಳು ತಮ್ಮ ಕಡೆಯಿಂದ ಎಷ್ಟು ಜನ ಮಹಿಳೆಯರಿಗೆ ಟಿಕೆಟ್ ನೀಡುತ್ತವೆ ಹಾಗೂ ಪಕ್ಷದ ಉನ್ನತ ಸಮಿತಿಗಳಲ್ಲಿ ಎಷ್ಟು ಮಂದಿ ಮಹಿಳೆಯರಿಗೆ ಸ್ಥಾನಾವಕಾಶ ಒದಗಿಸುತ್ತವೆ ಎಂಬುದನ್ನು ಅವಲೋಕಿಸಿದರೆ ಇವರ ಹೇಳಿಕೆಗಳು ಎಷ್ಟು ಸುಳ್ಳು ಎಂಬುದು ಅರಿವಾಗುತ್ತದೆ.*

***- ಡೆಕ್ಕನ್ ಹೆರಾಲ್ಡ್ ಪತ್ರಿಕೆಯಲ್ಲಿ***

# ರಾಜಕೀಯ ಮತ್ತು ಮಹಿಳೆ

ಮಹಿಳೆಯರು ರಾಜಕೀಯದ ಎಲ್ಲಾ ಹಂತಗಳಲ್ಲೂ ಸಮಾನ ಅಧಿಕಾರ ಪಡೆಯುವವರೆಗೂ, ಯಾವ ಸಮಾಜವೂ ಸ್ತ್ರೀಯರಿಗೆ ಸಮಾನ ಅಂತಸ್ತು ಇರುವುದೆಂದು ಸಾಧಿಸಲಾರದು. ಸ್ಥಳೀಯ ಸ್ವ ಆಡಳಿತ ಘಟನೆಗಳು, ಕಾರ್ಮಿಕ ಸಂಘಟಗಳು, ಪಟ್ಟಣದ ಮತ್ತು ಗ್ರಾಮೀಣ ಬಡವರ ಸ್ವಯಂ ನಿಯಂತ್ರಣ ಸಮೂಹಗಳು, ಜಾತಿ/ಗುಂಪುಗಳ ಒಕ್ಕೂಟಗಳು ಮುಂತಾದ ರಾಜಕೀಯ ರಂಗದಲ್ಲಿ ಸ್ತ್ರೀಯರ ಪ್ರವೇಶವು, ಸಾರ್ವಜನಿಕ ಸ್ಥಳಗಳಲ್ಲಿ ಸ್ತ್ರೀ-ಪುರುಷರ ನಡುವಿನ ಅಧಿಕಾರ - ಪ್ರಮಾಣದ ಒಂದು ಬಗ್ಗೆಯ ಅಳತೆಯ ಮಾಪನದ ರೀತಿ. - ನಿರಂತರವಾಗಿಯೂ ಮತ್ತು ಬಹುಕಾಲ ಉಳಿಯುವ ಸ್ತ್ರೀಯರ ಅಸಮಾನತೆಯಲ್ಲಿನ ಮಾರ್ಪಡೆಯು, ಅಗತ್ಯವಾಗಿ ಒಂದು ರಾಜಕೀಯ ಸಂಪ್ರದಾಯ ನೀತಿ; ಈವರೆಗೂ ಪುರುಷರು, ಅದರಲ್ಲೂ ಉಚ್ಚ ವರ್ಗದ ಸಾಮಾಜಿಕ ಗುಂಪುಗಳಿಗೆ ಸೇರಿದವರು ನಿಯಂತ್ರಿಸುತ್ತಿದ್ದ ಸಾಂಪ್ರದಾಯಿಕ ಸಂಸ್ಥೆಗಳಲ್ಲಿ ರಾಜಕೀಯ ಅಧಿಕಾರವನ್ನು ಸ್ತ್ರೀಯರು ''ಧಾಳಿ ಮಾಡಿ'' ಪಡೆದರೆ, ಈ ಪದ್ಧತಿಯನ್ನು ಫಲಪ್ರದವಾಗಿ ಪೂರ್ತಿಗೊಳಿಸಬಹುದು.''

ಮಹಿಳಾ ರಾಜಕಾರಣಿ ಮತ್ತು ಅಧಿಕಾರಸ್ತರನ್ನು ಕುರಿತು ಈ ರೀತಿಯ ಸಾರ್ವಜನಿಕ ಅಭಿಪ್ರಾಯಗಳಿವೆ ''ಅವರು ಪುರುಷರಿಗಿಂತ ಭಿನ್ನವಲ್ಲ; ಬಹುಶಃ ಮತ್ತು ಸಹ ಕೆಡುಕರು'', ''ಅವರು ಪೂರ ಅಸಮರ್ಥರು ಮತ್ತು ನಿಷ್ಪ್ರಯೋಜಕರು'', ''ಸ್ತ್ರೀಯರ ಅಭಿವೃದ್ಧಿಗೆ ಅವರು ಏನನ್ನೂ ಮಾಡಿಲ್ಲ'' - ಸ್ತ್ರೀಯರು, ಪ್ರಾಮುಖ್ಯ ರಾಜಕೀಯ ರಚನೆಗಳು ಕೆಲಸ ಮಾಡುವ ರೀತಿಗಳಿಗೆ ಹೊಂದಿಕೊಂಡರೆ, ತಾವು ಅವುಗಳಲ್ಲಿ ಇತರರ ನೆರವಿಲ್ಲದೆಯೇ ಉಳಿಯಬಹುದು. ಅನುಕರಣೆ ಮಾಡಲು ಇತರ ಆದರ್ಶಗಳ ಅಭಾವದಲ್ಲಿ, ಮಹಿಳೆಯರು ಈಗ ಆಚರಣೆಯಲ್ಲಿರುವ ಆಡಳಿತ ಪದ್ಧತಿಗಳಿಂದ (ಅವು ಆಕ್ರಮಣಶೀಲ ಮತ್ತು ಸರ್ವಾಧಿಕಾರತ್ವ ಪದ್ಧತಿಗಳಾಗಿರಬಹುದು ಪ್ರಭಾವಿತರಾಗುತ್ತಾರೆ; ಅವು ಸಾಂಪ್ರದಾಯಿಕ (ವಂಶಪಾರಂಪರ್ಯ ಮತ್ತು ಆಶ್ರಯದಾತ) ರೀತಿಗಳಾಗಿರಬಹುದು. ಇಂತಹ ಸಂಸ್ಥೆಗಳಲ್ಲಿ ಪ್ರವೇಶ ಪಡೆದ ಮಹಿಳೆಯೊಬ್ಬಳೇ, ಸ್ವಶಕ್ತಿಯಿಂದ ಅವುಗಳಲ್ಲಿ ಬೇರೂರಿರುವ ರೀತಿ ನಿಯಮಗಳನ್ನು ಬದಲಾಯಿಸಲಾರಳು; ಈ ಸಂಸ್ಥೆ ಮತ್ತು ರಚನೆಗಳಲ್ಲಿರುವ, ತಮಗೆ ಲಾಭದಾಯಕವಾದ ಪರಮ ಪ್ರಭುತ್ವದ ಸಿದ್ಧಾಂತಗಳನ್ನು ''ಅಧಿಕಾರಸ್ತ ಸ್ತ್ರೀಯರು'' ಬದಲಾಯಿಸಲು ಇಚ್ಛೆ ಪಡುವುದಿಲ್ಲ; ಎಲ್ಲಿ ಉತ್ತಮ ವರ್ಗಕ್ಕೆ ಸೇರಿದ ಮಹಿಳೆಯರೇ ಇರುವರೋ ಹಾಗೂ ಎಲ್ಲಿ ಪುರುಷರ ಪರಮ ಪ್ರಭುತ್ವವನ್ನು ವಿರೋಧಿಸುವುದರಿಂದ, ಸ್ತ್ರೀಯರು ತಮ್ಮ ಉಚ್ಚ ವರ್ಗದ ಮತ್ತು ಜಾತಿಯ ಬಾಧ್ಯತೆಗಳನ್ನು ಕಳೆದುಕೊಳ್ಳಬೇಕಾಗುತ್ತದೆಯೋ, ಅಲ್ಲಿ ಇದು ನಿಜವಾದ ವಿಷಯ.

ಆದ್ದರಿಂದ, ಸಂಸ್ಥೆಗಳು ಮತ್ತು ರಚನಾ ಪದ್ಧತಿಗಳಲ್ಲಿ ಸ್ತ್ರೀ-ಪುರುಷರ ಗುಂಪುಗಳ ಲಿಂಗ ನ್ಯಾಯ ದೊರಕಬೇಕಾದರೆ,

1. ಈ ಸಂಸ್ಥೆಗಳಲ್ಲಿನ ಸಂಸ್ಕೃತಿಗಳು ಮತ್ತು ಕಾರ್ಯ ರೀತಿಗಳ ಮೇಲೆ ಪರಿಣಾಮವಾಗಬೇಕಾದರೆ, ಸ್ತ್ರೀ-ಪುರುಷರ ಸಮರ್ಥನೆಯ ಮನೋಭಾವದ ಕೆಲವು ಮಹಿಳೆಯರಾದರೂ ಇರಬೇಕು.

2. ಈ ಮಹಿಳೆಯರಿಗೂ ಮತ್ತು ಇವರು ಹೊಣೆಗಾರರಾಗುವಂತಹ ಸಾರ್ವಜನಿಕ ಜನಸಮುದಾಯದ ಬೆಂಬಲವುಳ್ಳ ಆಧುನಿಕ ಮಹಿಳಾ ಆಂದೋಲನಕ್ಕೂ ಗುರಿ ಸಾಧಿಸುವ ಸಂಬಂಧ ಏರ್ಪಡಬೇಕು.

ರಾಜಕೀಯ ಅಧಿಕಾರದ ರೀತಿಯ ಪರಿವರ್ತನೆ ಕೇವಲ ಮಹಿಳೆಯರ ಜವಾಬ್ದಾರಿಯೊಂದೇ ಸಾಲದು. ಕೆಲವು ದೂರದರ್ಶಿ ಮಹಿಳೆಯರ ಪ್ರಯತ್ನಗಳಿಗೆ, ಸರ್ಕಾರದ ಹಾಗೂ ಸಾಂಪ್ರದಾಯಿಕ ರಚನೆಗಳ, ಹಾಗೂ ಪರಿವರ್ತನಾ ಮನೋವೃತ್ತಿಯ ಪುರುಷರ ಸಹಕಾರವಿಲ್ಲದಿದ್ದರೆ, ಅಂತಹ ಮಹಿಳೆಯರ ಪ್ರಯತ್ನಗಳು ಅಪರಿಣಾಮಕಾರಿಯಾಗುವುವು. ಈಚೆಗೆ ಮೂರನೇ ಒಂದು ಭಾಗ ಸ್ಥಾನಗಳ ಮಹಿಳಾ ಮೀಸಲಾತಿಯ ಮಸೂಧೆಯನ್ನು ಲೋಕ ಸಭೆಯಲ್ಲಿ ಮಂಡಿಸುವಾಗ, ಮೊದಲೂ ಅದಕ್ಕೆ ಸಮ್ಮತಿಸಿದ್ದ ಸರ್ಕಾರವು ಅಂತಿಮದಲ್ಲಿ ಹಿಂತೆಗೆದದ್ದು ಈ ಪರಿಸ್ಥಿತಿಗೆ ಒಂದು ನಿದರ್ಶನ. ಲೋಕಸಭೆಯ ಮಹಿಳಾ ಸದಸ್ಯರಲ್ಲಿ ಬೆಂಬಲವಿದ್ದಾಗ್ಯೂ, ಈ ಮಸೂಧೆಯನ್ನು ಮಂಡಿಸಲಾಗಲಿಲ್ಲ; ಎಲ್ಲಾ ಪಕ್ಷಗಳ ಸರ್ವಸಮ್ಮತಿ ಈ ಮಸೂಧೆಗೆ ಇಲ್ಲವೆಂದು ಸರ್ಕಾರವು ಘೋಷಿಸಿತು.

ಈಚೀಚೆಗೆ, ಬಡ ಮಹಿಳೆಯರು, ಅಧಿಕ ಸಂಖ್ಯೆಯಲ್ಲಿ ರಾಜಕೀಯ ರಂಗಕ್ಕೆ ಪ್ರವೇಶಿಸುತ್ತಿರುವುದು ಅವರ ಸಾಮರ್ಥ್ಯಕ್ಕೆ ನಿದರ್ಶನ. ಸಂವಿಧಾನದಲ್ಲಿ ಎರಡು ಮೂಲಭೂತ ಸುಧಾರಣೆಗಳ ಮೂಲಕ, ಪಟ್ಟಣಗಳ ಹಾಗೂ ಗ್ರಾಮೀಣ ಸ್ಥಳೀಯ ಸರ್ಕಾರಿ ಘಟಕಗಳಲ್ಲಿ ಮಹಿಳೆಯರ ಹೆಚ್ಚಿನ ಪಾತ್ರ ಮತ್ತು ಪ್ರಾತಿನಿಧ್ಯತೆಗಳನ್ನೂ ಕಾನೂನೂ ಬದ್ಧ ಮಾಡಿ, ಅದಕ್ಕೆ ಅವಕಾಶಗಳನ್ನು ಉಂಟು ಮಾಡಿತು. ಆದರೆ ಈ ಮಹಿಳೆಯರಿಗೆ ಸ್ತ್ರೀಲಿಂಗ ಸಂಬಂಧ ಅನೇಕ ಅನುಕೂಲ / ಪ್ರತಿಬಂಧಗಳು ಅಂದರೆ ಅಜ್ಞಾನ, ಅಸಾಕ್ಷರತೆ, ವೇತನದ ಕಸುಬಿನೊಂದಿಗೆ ಗೃಹದ ಮತ್ತು ಮಕ್ಕಳ ಪಾಲನೆಯ ಜವಾಬ್ದಾರಿ, ಸಾರ್ವಜನಿಕ ಜೀವನ ಪ್ರವೇಶಕ್ಕೆ ಸಾಮಾಜಿಕ ಹಾಗೂ ಮನೆತನದ ವಿರೋಧ, ಹೀನ ವ್ಯಕ್ತಿತ್ವ ಮತ್ತು ಆತ್ಮವಿಶ್ವಾಸದ ಕೊರತೆ, ಸಾಮಾನ್ಯವಾಗಿ ಯಾವ ಶಿಕ್ಷಣವೂ ಇಲ್ಲದೆ ಅವರನ್ನು ಪ್ರತಿಷ್ಠಾಪಿಸಿದ ರಾಜಕೀಯ ಪದ್ಧತಿಗಳ ಅಜ್ಞಾನ ಇವುಗಳು ಇರುತ್ತವೆ. ಪುರುಷರು ತಮ್ಮ ಸ್ತ್ರೀಯ ಬದಲು ಸಭೆಗಳಲ್ಲಿ ಪಾತ್ರವಹಿಸಲು ಆಗ್ರಹ ಪಡೆಸುವುದು ಮತ್ತು ಹೆಂಗಸರ ಅನಕ್ಷರತೆ, ಕಾರ್ಯವಿಧಾನಗಳ ಅಜ್ಞಾನ, ಸಭೆಗಳಿಗೆ ಸೂಚನೆ ಕಳುಹಿಸದಿರುವುದು, ಸ್ತ್ರೀಯರ ಗೈರುಹಾಜರಿಯನ್ನು, ನಿರ್ಣಯಗಳನ್ನು ತೆಗೆದುಕೊಳ್ಳುವುದು, ಅವರನ್ನು ಮುದ್ರೆ ಒತ್ತುವ ಯಂತ್ರಗಳಾಗುವಂತೆ ಬೆದರಿಸುವುದು - ಇವುಗಳು ಬಹುಮಂದಿ ಹೆಂಗಸರನ್ನು ಇಂತಹ ಸಂಸ್ಥೆಗಳ ಕಾರ್ಯಕ್ರಮಗಳಲ್ಲಿ ಭಾಗವಹಿಸುವುದನ್ನು ಪ್ರತಿಬಿಂಬಿಸಿವೆ.

ತದನಂತರ, ಹೆಂಗಸರ ಪರಿಣಾಮಕಾರಿಯಲ್ಲದ ಕಾರ್ಯನಿರ್ವಹಣೆ ಮತ್ತು ಅಧಿಕಾರ ನಡೆಸುವ ಅಸಮರ್ಥತೆಗಳನ್ನು ಬಹುವಾಗಿ ಆಕ್ಷೇಪಿಸುತ್ತಾರೆ. ಈ ರೀತಿಯ ನಕಾರಾತ್ಮಕ ಪ್ರತಿಕ್ರಿಯೆಗಳ ಕೆಳಗಿನ ಮಟ್ಟದ ಪುರುಷರಿಗೂ ಇದೇ ರೀತಿಯ ಮಿತಿಗಳು ಇರುತ್ತವೆ ಎನ್ನುವ ಅಂಶಗಳನ್ನು ನಿರ್ಲಕ್ಷಿಸಿವೆ (ಉದಾಸೀನ ಮಾಡಿದೆ). ಮಹಿಳೆಯರಿಗೆ ಸಾರ್ವಜನಿಕ ನಾಯಕತ್ವದ ಪಾತ್ರ ವಹಿಸುವ ಮೊದಲು, ಪುರಾಣದಲ್ಲಿನ ಆದರ್ಶಗುಣಗಳನ್ನು ಅವರು ಪಡೆಯಬೇಕೆಂಬ ಪೂರ್ವದ ಸಾಂಪ್ರದಾಯಿಕ ಆಚಾರವಚನವೇ ಇದಕ್ಕೆ ಕಾರಣ; ಹಾಗೂ "ಅನುಭವ ಮತ್ತು ಅಭ್ಯಾಸಗಳು" ಹೊಸ ಪಾತ್ರಗಳ ನಿರ್ವಹಣೆಗೆ ಬಹು ಉತ್ಕೃಷ್ಟ ರೀತಿ ಎನ್ನುವುದನ್ನು ಇದು ನಿರ್ಲಕ್ಷಿಸುತ್ತದೆ.

ಪ್ರತಿಕೂಲಕ್ಕೆ ಒಳಪಟ್ಟ ಪಂಗಡಗಳನ್ನು, ಚಾರಿತ್ರಿಕ ಹಾಗೂ ಸಾಮಾಜಿಕ ಸ್ಥಿತಿಗಳಿಗೆ ಸಂಬಂಧಪಟ್ಟ ಅಂಶಗಳ ಆಧಾರದ ಮೇಲೆ, ಬಹಿಷ್ಕರಿಸುವುದು, ಸಮಾಜದ ಯಥಾಸ್ಥಿತಿಯನ್ನು ಮುಂದುವರಿಸಲು ಕೇವಲ ನೆಪಮಾತ್ರ ಯತ್ನ.

ಹೆಂಗಸರ ಅಂತಸ್ತು ಮತ್ತು ಲಿಂಗ ಸಂಬಂಧದ ವಿಷಯಗಳಲ್ಲಿ ಸ್ಥಿರವಾದ ಪರಿವರ್ತನೆಯಾಗಲು, ಸ್ತ್ರೀಯರು ವಿವಿಧ ರಾಜಕೀಯ ಕ್ಷೇತ್ರಗಳಲ್ಲಿ ಪ್ರವೇಶ ಮಾಡಬೇಕು - ಅಂದರೆ ಕೇವಲ ಸಾಂಪ್ರದಾಯಿಕ ರಾಜಕೀಯ ಸಂಸ್ಥೆಗಳಾದ ಸ್ಥಳೀಯ, ಪ್ರಾಂತೀಯ ಮತ್ತು ರಾಷ್ಟ್ರೀಯ ಕಾರ್ಯಾಂಗಗಳಲ್ಲಿ ಮಾತ್ರವಲ್ಲ; ಗ್ರಾಮೀಣ ಮಟ್ಟದ ಸ್ಥಳಗಳಲ್ಲೂ (ಅಧಿಕಾರ ಪಡೆಯಬೇಕು) ಅಂದರೆ ಮಧ್ಯಸ್ತಿಕೆಯ ಸಮಿತಿಗಳು, ನೀರು ಮತ್ತು ಅರಣ್ಯ ಆಡಳಿತ ನಿರ್ವಹಣೆ ಸಮಿತಿಗಳು, ರೈತರ ಸಂಘಗಳು ಮುಂತಾದವುಗಳು. ಸೂಕ್ತ ಕ್ರಮಗಳಿಂದ, ಸ್ತ್ರೀಯರ ಪರಿಣಾಮಕಾರಿ ಪಾತ್ರಕ್ಕೆ ಅಡಚಣೆಗಳನ್ನು ನಿರ್ಮೂಲವಾಗದ ಹೊರತು, ಈ ಮೇಲಿನ ಅವಕಾಶಗಳು ಸಾಧ್ಯವಿಲ್ಲ; ಉದಾಹರಣೆಗೆ, ರಾಜಕೀಯ ಘಟಕಗಳಲ್ಲಿನ ಸ್ತ್ರೀಯರಿಗಾಗಿ ಮೀಸಲಾತಿ ಮತ್ತು ನಿಶ್ಚಿತ ಕಾರ್ಯಕ್ರಮಗಳು ಹಾಗೂ ಸ್ತ್ರೀಯರ ಸ್ಥಿತಿ ಉತ್ತಮಗೊಳ್ಳಲು ರೂಪಿಸುವ ಶಾಸನಾಂಗದಲ್ಲಿನ ಸುಧಾರಣೆಗಳಿಗಿಂತ, ಬಹು ಹೆಚ್ಚಿನ ಪ್ರಮಾಣದ ಪ್ರಯತ್ನಗಳ ಅಗತ್ಯವಿದೆ.

## *ರಾಜಕೀಯ ಕ್ಷೇತ್ರಗಳಲ್ಲಿ ಮಹಿಳೆಯರಿಗೆ ಅವಕಾಶ ಮತ್ತು ಅದರ ಮೇಲಿನ ನಿಯಂತ್ರಣದ ಅಧ್ಯಯನದಲ್ಲಿ ಕಂಡುಬಂದ ಮುಖ್ಯ ಅಂಶಗಳು:*

★ ಮತದಾನದಲ್ಲಿ ಭಾಗವಹಿಸುವುದು ಹೆಚ್ಚು ಪ್ರಮಾಣದಲ್ಲಿತ್ತು (ಶೇ.90); ಆದರಲ್ಲಿ ಲಿಂಗ ಭೇದಬಾವ / ವ್ಯತ್ಯಾಸಗಳು ಕಂಡು ಬರಲಿಲ್ಲ.

★ ಚುನಾವಣೆಗಳ ಸ್ಪರ್ಧೆಯಲ್ಲಿ ಸ್ತ್ರೀ-ಪುರುಷ ಲಿಂಗಸಂಬಂಧದ ವ್ಯತ್ಯಾಸವು ಮಾಹಿತಿಯಿಂದ ಕಂಡು ಬಂದಿದೆ; ಮಹಿಳೆಯರು ಕೇವಲ ಗ್ರಾಮ ಪಂಚಾಯಿತಿ ಚುನಾವಣೆಗಳಲ್ಲಿ ಮಾತ್ರ, ಸ್ಪರ್ಧಿಸಿದ್ದರು (30 ಗಂಡಸರು ಮತ್ತು 15 ಹೆಂಗಸರು); ಅಧ್ಯಯನದ ಪುರುಷ ಪ್ರತಿನಿಧಿಗಳಲ್ಲಿ ಸ್ವಲ್ಪಮಟ್ಟಿಗಾದರೂ ಇತರ ಚುನಾವಣೆಗಳಲ್ಲಿ ಅಂದರೆ ತಾಲ್ಲೂಕು ಪಂಚಾಯಿತಿ (3), ಜಿಲ್ಲಾ ಪಂಚಾಯಿತಿ (1), ಸಹಕಾರ ಸಂಸ್ಥೆ (10), ಸ್ಪರ್ಧಿಸಿದ್ದರೆ, ಮೇಲು ಮಟ್ಟದ ರಾಜಕೀಯ ಘಟಕಗಳಲ್ಲಿ ಸ್ತ್ರೀಯರ ಅಭಾವವು ಸ್ಪಷ್ಟವಾಗಿತ್ತು; ರಾಜ್ಯದ ವಿಧಾನಸಭೆ ಮತ್ತು ರಾಷ್ಟ್ರದ ಲೋಕಸಭೆಗಳಲ್ಲೂ

ಇದೇ ದುಃಖಕರವಾದ ನಿಜಸ್ಥಿತಿ.

★ ಇತರ ಸ್ಥಳೀಯ ಮಟ್ಟದ ಪಂಗಡಗಳ ಸಮೂಹಗಳಲ್ಲೂ, ಅಂದರೆ ಹೆಚ್ಚಿನ ಸಾರ್ವಜನಿಕ ಬೆಂಬಲದ ರೈತರ ಸಂಘಗಳು, ಯುವಕರ ಸಮೂಹಗಳು, ಜಾತೀಯ ಸಂಸ್ಥೆಗಳು ಮುಂತಾದವುಗಳಲ್ಲಿ ಸ್ತ್ರೀಯರು ಸಾಮಾನ್ಯವಾಗಿ ಮಹಿಳಾ ಸಂಸ್ಥೆಗಳಲ್ಲಿ, ಸದಸ್ಯರಾಗಿ ಭಾಗವಹಿಸುತ್ತಿದ್ದರು. ಉದಾಹರಣೆಗೆ, 26 ಗಂಡಸರು ರಾಜಕೀಯ ಪಕ್ಷಗಳಲ್ಲಿ ಮತ್ತು 68 ಪುರುಷರು ಕೋಮುವಾದ / ಗಿರಿಜನರ ಸಂಸ್ಥೆಗಳಲ್ಲಿ ಸದಸ್ಯರಾಗಿರುವ ವರದಿಯಾಗಿದ್ದರೆ, ಸ್ತ್ರೀಯರ ಸಂಖ್ಯೆ 3 ಮತ್ತು 5. 168 ಹೆಂಗಸರು ಮಹಿಳಾ ಸಂಘಗಳ ಸದಸ್ಯರಾಗಿದ್ದರು.

## ಮಹಿಳೆಯರ ಅವ್ಯಕ್ತ ಯುಕ್ತಿ ಸಾಧನೆಗಳ (ಬುದ್ಧಿ ಮತ್ತು ಕೌಶಲ್ಯಗಳು) ನಿಯಂತ್ರಣ ಮತ್ತು ಅವಕಾಶಗಳು:

ಸುದ್ದಿ ಮತ್ತು ತಿಳುವಳಿಕೆ, ಸಮಾಚಾರಗಳನ್ನು ರಚಿಸುವ, ಸಂಗ್ರಹಿಸುವ, ಸೂಕ್ಷ್ಮವಾಗಿ ಪರಿಶೀಲಿಸುವ, ಹೋಲಿಸುವ ಮತ್ತು ಸೂಕ್ತ ರೀತಿಯಲ್ಲಿ ಉಪಯೋಗಿಸಲು ಅಗತ್ಯವಾದ ಕೌಶಲ್ಯ (ಜಾಣ್ಮೆ) ಮುಂತಾದ ಅಸ್ಪರ್ಶ ಯುಕ್ತಿ ಸಾಧನೆ, ಆತ್ಮವಿಶ್ವಾಸ, ಮುಂತಾದ ಕಲೆಗಳು ಪ್ರಾಪಂಚಿಕ ಯುಕ್ತಿ ಸಾಧನಗಳಿಗೆ ಅವಕಾಶ ಪಡೆಯಲು ಮತ್ತು ತಮ್ಮ ಹಕ್ಕುಗಳನ್ನು ಪ್ರತಿಪಾದಿಸಲು ಮಹಿಳೆಯರಿಗೆ ಅವಶ್ಯಕವಾಗಿರಬೇಕಾದ ಅವ್ಯಕ್ತ ಚಾತುರ್ಯಗಳು.

ನಮ್ಮ ಅಧ್ಯಯನದಲ್ಲಿ, ಯುಕ್ತಿ ಸಾಧನೆಗಳನ್ನು ಎರಡು ಭಾಗಗಳಾಗಿ ವಿಂಗಡಿಸಿ ಅರ್ಥ ಮಾಡಿಕೊಳ್ಳಬಹುದು.

1. ಆತ್ಮವಿಶ್ವಾಸ, ಸ್ವಯೋಗ್ಯತೆ, ಮಾತನಾಡಿ ತಿಳಿಪಡಿಸುವ ಕೌಶಲ್ಯ ಮುಂತಾದ ವ್ಯಕ್ತಿಯ ಸ್ವಭಾವಿಕವಾಗಿ ಪಡೆದ ಬುದ್ಧಿಸಾಧನೆಗಳು.

2. ಜ್ಞಾನ ತಿಳುವಳಿಕೆ ಮತ್ತು ಚಾತುರ್ಯ ಮುಂತಾದ ಅಭ್ಯಾಸ ಮಾಡಿ ಕಲಿತ ಬುದ್ಧಿ ಕೌಶಲ್ಯಗಳು.

ನ್ಯಾಯಬದ್ಧವಾದ ಸಮಾಜದಲ್ಲಿ ಯಾವ ವ್ಯಕ್ತಿಯ ಸ್ವಾಭಾವಿಕ ಅಂತಸ್ತನ್ನು ಪರಿಗಣಿಸದೆ, ಅವನು / ಅವಳು ಮೊದಲನೆ ಭಾಗದಲ್ಲಿನ ಕೌಶಲ್ಯಗಳನ್ನು ಪಡೆಯುವ ಅವಕಾಶವಿರುವುದು. ಅಂದರೆ, ವೈಯಕ್ತಿಕ ವ್ಯತ್ಯಾಸಗಳನ್ನು ಪರಿಗಣಿಸದೆ, ಸಾಮಾಜಿಕ ಪಕ್ಷಪಾತದಿಂದ ಯಾರೊಬ್ಬರೂ ಆತ್ಮವಿಶ್ವಾಸ ಹಾಗೂ ಯೋಗ್ಯತೆಯನ್ನು ಅಲ್ಲಗಳೆದು ನಿರಾಕರಿಸದ, ಮತ್ತು ಎಲ್ಲರೂ ತಮ್ಮ ಯೋಜನೆ, ಭಾವನೆ ಹಾಗೂ ಕಲ್ಪನೆಗಳನ್ನು ವ್ಯಕ್ತಪಡಿಸುವ ಹಕ್ಕು ಇರುವ ಸಾಮಾಜಿಕ ವಾತಾವರಣವನ್ನು ನಿರ್ಮಿಸಬೇಕು; ಇದಕ್ಕೂ ಮೇಲಾಗಿ, ಎಲ್ಲಾ ವ್ಯಕ್ತಿಗಳೂ ವಿಧ್ಯಾಭ್ಯಾಸ, ಶಿಕ್ಷಣ, ಸಾರ್ವಜನಿಕ ಸುದ್ದಿಸಮಾಚಾರ ಪಡೆಯುವ ಹಕ್ಕುಗಳನ್ನು ರಕ್ಷಿಸುವುದರ ಮೂಲಕ, ಪ್ರತಿವ್ಯಕ್ತಿಯೂ ಸುದ್ದಿಸಮಾಚಾರ, ಜ್ಞಾನ ಹಾಗೂ ಕೌಶಲ್ಯ ಪಡೆಯುವ ಸಮಾನ ಅವಕಾಶಗಳಿಗೆ, ನ್ಯಾಯವಾದ ಸಮಾಜವು ಭರವಸೆ ಕೊಡುತ್ತದೆ; ಅವೇ ನ್ಯಾಯ-ಸಮಾಜದ ಮೂಲ ಗುಣಗಳು. ಐತಿಹಾಸಿಕ ಹಾಗೂ ಸಾಮಾಜಿಕ ಅಡಚಣೆಗಳಿಂದ, ಸ್ತ್ರೀಯರಿಗೆ ಸಾಂಪ್ರದಾಯಿಕ ಜ್ಞಾನ ಪಡೆಯಲು ಬಹು ಕಡಿಮೆ ಅವಕಾಶವಿತ್ತು. ಚಾರಿತ್ರಿಕವಾದ ಅಡ್ಡಿಗಳು, ಸಮಾಜ ಘಟಕಗಳ ಮಟ್ಟದ ಅಭಿವೃದ್ಧಿ ಕಾರ್ಯಪದ್ಧತಿಗಳಲ್ಲಿ ಸ್ತ್ರೀಯರು ಭಾಗವಹಿಸುವ ಅರ್ಹತೆಯನ್ನು ವಿರೋಧಿಸಿದವು. ಹೆಂಗಸರ ಬುದ್ಧಿಶಕ್ತಿಯ ಕೆಳಮಟ್ಟದ ಬಗ್ಗೆ ಊಹೆಗಳು, ಹಾಗೂ ಸಿದ್ಧಾಂತ ಮತ್ತು ಸಾಂಸ್ಕೃತಿಕ ಅಂಶಗಳು, ಮಹಿಳೆಯರನ್ನು ಯೋಜನೆ ಹಾಗೂ ಅಭಿವೃದ್ಧಿ ಕಾರ್ಯರೀತಿಗಳಿಂದ ಹೊರಗಿಡಿಸುವುದನ್ನು ಸಮರ್ಥಿಸಲು, ಪುರುಷರಿಗೆ (ಸಮಾಜ ನಾಯಕರು, ಅಧಿ ಕಾರಿಗಳು ಮತ್ತು ಆಡಳಿತ ವರ್ಗಕ್ಕೆ) ಗೋಪ್ಯವಾದ ಪಿತೂರಿ ಮಾಡುವ ಸಾಧನವಾಯಿತು. ಇದರ ಪರಿಣಾಮವೆಂದರೆ, ಇವುಗಳು ಸಮಾಜೋದ್ಧಾರ ಕಾರ್ಯನೀತಿ ಮತ್ತು ಕಾರ್ಯಕ್ರಮಗಳಲ್ಲಿ ಸ್ತ್ರೀಯರನ್ನು ಕಡೆಗಣಿಸಿ, ಅವರ ಹಿತಾಸಕ್ತಿಗಳಿಗೆ ಧಕ್ಕೆ ತಂದಿತು. ಸಮಾಜದ ಅಭಿವೃದ್ಧಿಯಲ್ಲಿ ಸ್ತ್ರೀಯರ ಪಾತ್ರವನ್ನು ಹೆಚ್ಚಿಸುವುದೇ ಮಹಿಳಾ ಆಂದೋಲನಗಳ ಮುಖ್ಯ ಗುರಿ; ಅದರಿಂದ, ಸ್ತ್ರೀಯರ ಸಾಮರ್ಥ್ಯ ಹಾಗೂ ತಿಳುವಳಿಕೆಗಳ ಬಗ್ಗೆಯ ಊಹಾಪೋಹಗಳಿಗೆ ಪರಿಣಾಮಕಾರಿಯಾಗಿ ಸವಾಲು ಮಾಡಬಹುದು. ಈಗ ಹೆಂಗಸರು ನಂಬಿಕೆಗೆ ಅರ್ಹ, ಅರ್ಹತೆ ಪಡೆದಿದ್ದಾರೆ; ತಮ್ಮ ಹಿತಾಸಕ್ತಿಗಳನ್ನು ಉತ್ತಮಗೊಳಿಸಲು ಇದೊಂದು ಪ್ರಾಮುಖ್ಯ ಹಾಗೂ ಅಗತ್ಯವಾದ ಯುಕ್ತಿಸಾಧನ.

ಆದರೆ ಮಹಿಳೆಯ ಅಂತಸ್ತಿನ ಅಭಿವೃದ್ಧಿಯ ಯಾವಾಗಲೂ ಒಂದು ಸ್ಪಷ್ಟತರ್ಕ ಶಾಸ್ತ್ರಬದ್ಧವಾಗಿಯೂ ಇಲ್ಲ ಅಥವಾ ಯಾಂತ್ರಿಕ ಕಾರ್ಯಕ್ರಮವಾಗಿಯೂ ಇಲ್ಲ "ಹೆಂಗಸರ ದರ್ಜೆಯನ್ನು ಉತ್ತಮ ಪಡಿಸಬೇಕಾದರೆ, ಸ್ತ್ರೀಯರ ಸಮಾನತೆಯ ಗುರಿಗಾಗಿ ಕಾರ್ಯಕ್ರಮಗಳನ್ನು ರೂಪಿಸಬೇಕು" ಎಂದು ಅಭಿವೃದ್ಧಿಯ ಕಾರ್ಯಕರ್ತರು ಗಮನಿಸಿದ್ದಾರೆ. ತಿಳುವಳಿಕೆ, ಜ್ಞಾನ ಹಾಗೂ ಕೌಶಲ್ಯಗಳಂತಹ ಬುದ್ಧಿ ಸಾಧನಗಳನ್ನೂ

ಸ್ತ್ರೀಯರು ಅಭಿವೃದ್ಧಿ ಕಾರ್ಯ ಚಟುವಟಿಕೆಗಳಲ್ಲಿ ಭಾಗವಹಿಸುವಿಕೆಯನ್ನು ಉತ್ತಮ ಪಡಿಸುವುದಕ್ಕೆ ಮಾತ್ರ ಸೀಮಿತಪಡಿಸಿದೆ. ಇವನ್ನು ತಮ್ಮ ಅದೀನತೆಯನ್ನೂ ವಿರೋಧಿಸಿ ಪ್ರಶ್ನಿಸುವ ಸಾಧನವನ್ನಾಗಿ ಮಾಡಿಕೊಳ್ಳುವ ಅಗತ್ಯವೂ ತಿಳಿದಿದೆ. ಆದ್ದರಿಂದ, ಸ್ತ್ರೀಯರ ಸಮಾನತೆ ಮತ್ತು ಅಭಿವೃದ್ಧಿ ಅವಕಾಶಗಳ ಸಾಮರ್ಥ್ಯವು, ಸುದ್ದಿ ಸಮಾಚಾರ ವರ್ಗಾವಣೆ, ಕುಶಲತೆಯ ನಿರ್ಮಾಣ ಮುಂತಾದವುಗಳ ಪ್ರೋತ್ಸಾಹ ಕ್ರಮಗಳ ಪ್ರೋತ್ಸಾಹಕವಾಗಬಲ್ಲದು. ಈ ಚಾತುರ್ಯಗಳನ್ನು ಪಡೆಯಲು ಸ್ತ್ರೀಯರಿಗೆ ಪ್ರತ್ಯೇಕವಾದ ''ಸ್ಥಳ ಮತ್ತು ವೇಳೆ'' ಇರುವುದೆಂದು ಇಲ್ಲಿ ಊಹಿಸಲಾಗಿದೆ. ಅಂದರೆ, ಭಾರತದ ಅನೇಕ ಭಾಗಗಳಲ್ಲಿನ ಸಂಘ, ಸಮೂಹ, ಮುಂತಾದ ಒಕ್ಕೂಟಗಳಿಗೆ ಮಹಿಳೆಯರು ಸೇರುವುದನ್ನು ಪ್ರೋತ್ಸಾಹಿಸುವುದರ ಮೂಲಕ, ಇದಕ್ಕೆ ಸೂಕ್ತವಾದ ಜಾಗ ಮತ್ತು ಸಮಯಗಳನ್ನು ಕಾರ್ಯಗತ ಮಾಡಲಾಗಿದೆ. ಮಹಿಳೆಯರು ಒಟ್ಟುಗೂಡಲು, ಅವರ ಮನೋಭಾವನೆಗಳನ್ನು ಬಹಿರಂಗ ಪಡಿಸಲು, ಹಾಗೂ, ಯಾವಾಗಲೂ ಅವರನ್ನು ಚಾರಿತ್ರಿಕವಾಗಿ ಬಹಿಷ್ಕರಿಸಿದ್ದ ಬುದ್ಧಿ ಸಾಮರ್ಥ್ಯಗಳಿಗೆ ನೆರವು ನೀಡಲು, ಈ ಮಹಿಳಾ ಒಕ್ಕೂಟಗಳು ಒಂದು ರಚನೆ ಹಾಗೂ ಸಂಕೇತವಾಗುತ್ತದೆ. ಸೂಕ್ಷ್ಮವಾಗಿ ವಿಮರ್ಶಿಸುವುದು, ಗುರಿಗಳನ್ನು ಯೋಜಿಸುವುದು, ಒಗ್ಗಟ್ಟಾಗಿ ಕಾರ್ಯ ಮಾಡುವುದು - ಇವುಗಳ ಮೂಲಕ ಸ್ತ್ರೀಯರು ಪ್ರಭಾವಿತರೂ ಮತ್ತು ಶಕ್ತಿವಂತರೂ ಆಗುವ ರಾಜಕೀಯ ತಳಹದಿಯನ್ನು ಕಟ್ಟಬಹುದು; ಇದರಿಂದ ನಾಯಕತ್ವದ ಅನುಭವಗಳ ಮತ್ತು ತಿಳುವಳಿಕೆಯ ಸಮಾಚಾರಗಳನ್ನು ಪಡೆದುಕೊಳ್ಳಬಹುದು; ಉಪನ್ಯಾಸ, ಮನ ಒಪ್ಪಿಸುವಿಕೆ, ಕರಾರು ಮಾಡುವಿಕೆ, ಸಮಾಲೋಚನೆ - ಸಂಧಾನ, ನಿರ್ಣಯ - ಮಾಡುವ, ವಿರೋಧಿಸುವ, ಎದುರುವಾದಿಸುವ - ಇಂತಹ ಯುಕ್ತಿ ಕೌಶಲ್ಯಗಳನ್ನು ಕಲಿಯಬಹುದು. ಇವುಗಳಿಂದ, ಸಂಘಟಿಸಿದ ಮಹಿಳೆಯರು ಒಟ್ಟಾಗಿ ಸಮಾಜದಲ್ಲಿನ ಸಂಪ್ರದಾಯಗಳನ್ನು ಮತ್ತು ನಂಬಿಕಾ ಪದ್ಧತಿಗಳನ್ನು ಪ್ರಶ್ನಿಸಬಹುದು; ಹಾಗೂ ಅವುಗಳನ್ನು ವಿರೋಧಿಸಿ ಪುನರ್ ರೂಪಿಸಬಹುದು. ಮುಖ್ಯವಾಗಿ ಇದರಿಂದ ಸ್ತ್ರೀಯರ ಸಾಮಾಜಿಕ ಪ್ರತ್ಯೇಕತೆಯು ಕೊನೆಗೊಳ್ಳುವುದು; ಇದು ಸಾಮಾಜಿಕ ಚಟುವಟಿಕೆಗಳಲ್ಲಿ ಭಾಗವಹಿಸುವ ಸಾಧನವಾಗುವುದು; ಅವರ ಪ್ರಯತ್ನಗಳಿಗಾಗುವ ಅಡಚಣೆಗಳನ್ನು ಸೂಕ್ತವಾಗಿ ನಿವಾರಿಸುವ ಸಹಾಯಕ ರಚನೆಯಾಗುವುದು.

ಅನೇಕ ಹೆಂಗಸರಿಗೆ, ಸ್ತ್ರೀ ಸಂಘಗಳು, ಸ್ಥಗಿತವಾದ ಸ್ತ್ರೀಯರ ಅಂತಸ್ತು ಮತ್ತು ಸುಧಾರಣೆಗಳ ನಡುವಿನ ಭಾವನೆಗಳ ಅಂತರದ ಬಗ್ಗೆ ಸಂಧಾನ ನಡೆಸುವ ಸಾಧನವಾಗಿದೆ. ಈ ಒಕ್ಕೂಟಗಳ ಮೂಲಕ ಸ್ತ್ರೀಯರು - ಬ್ಯಾಂಕ್, ಸಾಲವಿತರಣಾ ಸಂಸ್ಥೆ, ಆಡಳಿತ ಮುಂತಾದವುಗಳ ಅಧಿಕಾರಿಗಳೊಂದಿಗೆ ವ್ಯವಹಾರ ಮಾಡಿದ್ದಾರೆ. ಈ ಉಳಿತಾಯ ಮತ್ತು ಸಾಲದ ಸಂಸ್ಥೆಗಳು ಸ್ಥಳೀಯ ಸ್ವಯಂ ಆಡಳಿತ ಸಂಸ್ಥೆಗಳಲ್ಲಿ ಸ್ತ್ರೀಯರ ಪ್ರವೇಶಕ್ಕೆ ಉತ್ತೇಜಿಸಿ, ನೆರವು ಒದಗಿಸಿದೆ; ಮಹಿಳೆಯರ ಹಕ್ಕುಗಳ ಗೋಚರಕ್ಕೆ ಈ ಮಹಿಳಾ ಸಮೂಹಗಳು ಸಾಧನಗಳಾಗಿವೆ. ಇವುಗಳ ಕಾರ್ಯದಕ್ಷತೆಯನ್ನು ವಿಮರ್ಶಿಸಿ, ಸ್ತ್ರೀಯರ ಅಂತಸ್ತಿನ ಬಗ್ಗೆ ಸಮಾಜವು ಮರುಸುಧಾರಣೆ ಮಾಡಲು ಇಚ್ಛಿಸಬಹುದು. ಉತ್ತರ ಪ್ರದೇಶದಲ್ಲಿನ ''ಮಹಿಳಾ ಸಾಮಾಕ್ಯ ಯೋಜನೆ ಕಾರ್ಯಕ್ರಮ''ದಲ್ಲಿ ಶಿಕ್ಷಣ ಪಡೆದ ಮಹಿಳಾ ಪಂಪು-ಕೆಲಸಗಾರರು ಇದಕ್ಕೆ ಮುಖ್ಯ ಉದಾಹರಣೆ. ಸಮಾಜದ ಅಭಿವೃದ್ಧಿಗೆ. ಅವಶ್ಯಕವಾದ ಕುಶಲ ಕಸುಬುಗಳಲ್ಲಿ ಮಹಿಳೆಯರಿಗೆ ಶಿಕ್ಷಣ ಕೊಡುವುದಕ್ಕೆ ಪ್ರಾಧಾನ್ಯತೆಯತ್ತ ಈ ಕಾರ್ಯ ಯೋಜನೆಯು ಕಟ್ಟಡ ಕಟ್ಟುವ ಹಾಗೂ ಕೊಳವೆ ಬಾವಿಗಳ ಪಂಪುಗಳನ್ನು ಸರಿಮಾಡುವ ಕಸುಬುಗಳಲ್ಲಿ ಮಹಿಳೆಯರಿಗೆ ಶಿಕ್ಷಣ ಕೊಟ್ಟು, ಅದರ ಪರಿಣಾಮವಾಗಿ, ಪ್ರಶಂಸೆ ಪಡೆದಿದೆ. ''ಸ್ತ್ರೀಯರು ತಂತ್ರಜ್ಞಾನವನ್ನು ಕಲಿಯಲಾರರು'', ''ಹೆಂಗಸರು ಅಶಕ್ತರು'', ''ಈ ಕಸುಬುಗಳು ಗಂಡಸರಿಂದ ಮಾತ್ರ ಸಾಧ್ಯ'' ಎಂಬ ಕಾಲ್ಪನಿಕ ಕತೆಗಳನ್ನು ಸುಳ್ಳು ಮಾಡಿತು. ಸಾಂಪ್ರದಾಯಿಕರಾಗಿ ''ಮೈಲಿಗೆ''ಯವರೆಂದು ವಿಂಗಡಿಸಿದ್ದ ಬಡ ಮಹಿಳೆಯರಿಗೆ ಈ ಶಿಕ್ಷಣ ಕೊಟ್ಟದ್ದು ಜಾತಿ ಪದ್ಧತಿಯನ್ನು ಪ್ರಶ್ನಿಸುವ ಸಾಧನವಾಯಿತು; ಈ ''ಪಂಪ್‌ಯಂತ್ರ ರಿಪೇರಿ ಕಸುಬುದಾರ'' ಹೊಸ ಹೆಸರು, ಕೀಳುಕುಲದ ಹೆಂಗಸರಿಗೆ ಉಚ್ಚ ಕುಲದವರ ಪಂಪ್‌ಗಳನ್ನು ಸರಿಪಡಿಸುವ ಮೊದಲೇ, ಸಾಂಪ್ರದಾಯಿಕ ''ಮುಟ್ಟಬಾರದ ಬಹಿಷ್ಕಾರ''ದ ಬಗ್ಗೆ ಸಂಧಾನ ಮಾಡುವ ಅವಕಾಶ ಕಲ್ಪಿಸಿತು. ಹೆಂಗಸಿಗಾದರೋ ''ರೊಟ್ಟಿ, ಗೊಬ್ಬರ ಮಾಡುವ'' ಅಂತಸ್ತಿನಿಂದ 'ಯಂತ್ರ ಕಸುಬುದಾರ'' ದರ್ಜೆಗೆ ಮೇಲೇರಿಸಿ ಅರ್ಹತೆ ಪಡೆದಿದ್ದು ಬಹು ಪ್ರಮುಖ್ಯ ಬದಲಾವಣೆ.

ಈ ಪಂಪ್ ರಿಪೇರಿ ಮಹಿಳೆಯರ ಒಕ್ಕೂಟದ ಶಕ್ತಿಯು ಉಚ್ಚ ಕುಲದವರೊಂದಿಗೆ ವಿವಾದಗಳಲ್ಲಿ ಈ ಹೆಂಗಸರಿಗೆ ಅವರ ಪರ ನೆರವು ನೀಡುವ ಸಾಧನವಾಗಿದೆ.

ಸಾಂಪ್ರದಾಯಿಕ ಸಿದ್ಧಾಂತಗಳನ್ನು ''ಒಕ್ಕೂಟ''ಗಳ ಮೂಲಕವೂ ಹೆಂಗಸರು ವಿರೋಧಿಸಿ ಪ್ರಶ್ನಿಸಿದಾಗ, ಅವರ ಮನೆಗಳಲ್ಲಿ ಮತ್ತು ಸಮಾಜದಲ್ಲಿ ದೊಡ್ಡ ''ಉತ್ಕ್ರಾಂತಿ''ಯನ್ನು ಎಬ್ಬಿಸಿತು. ಮನೆಯಲ್ಲಿನ ಗಂಡಸರ ಪಾತ್ರದ ರಚನೆಯಲ್ಲಿ ಬದಲಾವಣೆಯೂ ಅವರಿಗೆ ಅಗೌರವ ತರುವುದೆಂಬ

CPMG/KA/BG-8/2003-05 RNI No. 45577/88

***Posted at Basavanagudi P.O. On the 25th of every Month***

ಮನೆತನದ ಧೋರಣೆಯಿಂದ, ''ಮಹಿಳಾ ಸಮೂಹ''ಗಳಲ್ಲಿನ ಹೆಂಗಸರ ಸಂಬಂಧವು, ಅನೇಕ ಕುಟುಂಬಗಳಲ್ಲಿ ಒಪ್ಪಿಗೆ ಪಡೆಯಲಿಲ್ಲ. ಇದುವರೆವಿಗೂ ಸಾಂಪ್ರದಾಯಿಕ ಅನುಮತಿ ಪಡೆದಿದ್ದ ಹೆಂಗಸರ ಮನೆಯೊಳಗಿನ ಪಾತ್ರವು, ಈ ಸಂಪ್ರದಾಯಗಳನ್ನು ವಿರೋಧಿಸಿ ಪ್ರಶ್ನಿಸತೊಡಗಿದ ಪರಿಸ್ಥಿತಿಯಲ್ಲಿ ಮಹಿಳೆಯರ ಅಂತಸ್ತು ಕೆಳಗಿಳಿಯುವಂತೆ ಮತ್ತು ಅವರು ಬೆದರಿಕೆಗೆ ಒಳಪಡುವಂತೆ ಕಂಡು ಬಂದಿತು. ಸ್ತ್ರೀಯರ ಈ ವೈಯಕ್ತಿಕ ಮತ್ತು ವ್ಯಕ್ತಿಗಳ ವಿಷಯ ಸ್ಥಿತಿಯಲ್ಲಿ, ಸ್ತ್ರೀ ಒಕ್ಕೂಟಗಳು ಅವರ ನೆರವಿಗೆ ಬಂದವು; ಇದರಿಂದ ಒಕ್ಕೂಟಗಳ ಕಾರ್ಯಗಳು ಪ್ರಶಂಸಾತ್ಮಕವಾಗುವುದರೊಂದಿಗೆ, ಹೆಂಗಸರ ಸಾಮಾಜಿಕ ಚಿತ್ರವು ಹೊಸದಾಗಿ ಮೂಡತೊಡಗಿತು. ಭಾರತದಲ್ಲಿ ಅನೇಕ ''ಮಹಿಳಾ ಕಾರ್ಯ ಸಂಘಗಳು'' ಸಮಾಜದ ನಂಬಿಕೆಗಳಿಸಿವೆ. ಮತ್ತು ಹೆಚ್ಚಿನ ವರ್ಚಸ್ಸು ಬೀರುತ್ತವೆ. ''ಮಹಿಳಾ ಮಿಲನ್''ನ ಮಹಿಳಾ ನಾಯಕರು ''ರಾಷ್ಟ್ರೀಯ ಕೊಳಚೆ ಪ್ರದೇಶ ವಾಸಿಗಳ ಒಕ್ಕೂಟ'' (ಎನ್.ಎಸ್.ಡಿ.ಎಫ್.)ನ ಪುರುಷ ನಾಯಕರೊಂದಿಗೆ ಸಂಧಾನ ಮಾಡಿ ಅವರ ''ಮೂಲಭೂತ ಅಗತ್ಯಗಳ ಮತ್ತು ವಾಸಿಸುವ ಮನೆ''ಯ ಹಕ್ಕುಗಳ ಸಂಬಂಧದ ಚಳವಳಿಯ ಕಾರ್ಯಕ್ರಮಗಳಿಗೆ ನೆರವು ನೀಡುತ್ತಿದ್ದಾರೆ.

ಪುರುಷರ ಎಸ್.ಎಸ್.ಡಿ.ಎಫ್. ಒಕ್ಕೂಟಕ್ಕೆ ''ಮಹಾಳಾ ಮಿಲನ್'' ಸಮೂಹವು ಒಂದು ಅಗತ್ಯವಾದ ರಾಜಕೀಯ ಸಹಾಯಕ ಪಕ್ಷವಾಗಿದೆ.

ಸ್ತ್ರೀ-ಒಕ್ಕೂಟಗಳು, ಅಧಿಕಾರದ ಮತ್ತು ಅಧಿಕಾರ ಸ್ಥಾನಗಳನ್ನು ಪಡೆಯುವ ಯುಕ್ತಿ ಸಾಧನಗಳ ಮೂಲ ಮಾರ್ಗವಾಗುತ್ತಿವೆ. ಕೇವಲ ಮೂಲ ಒಕ್ಕೂಟಗಳ ಮೂಲಕ ಮಾತ್ರವಲ್ಲದೆ, ಇತರರೊಡನೆ ಸೇರಿದ ಜಾಲಬಂಧ, ಕಾರ್ಮಿಕ ಸಂಘಗಳು ಮತ್ತು ಪ್ರಾದೇಶಿಕ ಪಕ್ಷ ಸಂಘಟನೆಗಳು - ಇವುಗಳ ಮೂಲಕವು ಮಹಿಳೆಯರು ಕಠಿಣ ಪರಿಸ್ಥಿತಿಗಳಲ್ಲೂ ಬಹು ಲಾಭದಾಯಕ ಪಾತ್ರವನ್ನು ವಹಿಸಿದ್ದಾರೆ; ಬದಲಾವಣೆಗಳನ್ನು ಪ್ರತಿಪಾದಿಸುವುದು, ಅಧಿಕಾರಿಗಳಿಂದ ಕಾರ್ಯ ಜವಾಬ್ದಾರಿಯನ್ನು ತಗಾದೆ ಮಾಡಿ ಕೇಳುವುದು, ಸಾಧನ ಸೌಲಭ್ಯಗಳಿಗಾಗಿ ಪ್ರಭಾವ ಬೀರುವುದು ಮುಂತಾದ ಕಾರ್ಯಗಳನ್ನು ''ರಾಜಕೀಯ ಶಕ್ತಿ''ಯ ರೂಪದಲ್ಲಿ ಮಹಿಳಾ ಸಮೂಹಗಳು ಮಾಡುತ್ತಿವೆ.

"Achala" 108, Skyline Surabhi,
14 - P , Vidyapeeta Road,
BSK III Stage,
Bangalore - 560 085

To :

Smt/Sri